# ಶ್ರೀರಂಗಪಟ್ಟಣದ ಐತಿಹಾಸಿಕ ಹಿನ್ನೆಲೆ : ಒಂದು ಅಧ್ಯಯನ

ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಪ್ರಾಚೀನ ಇತಿಹಾಸ ಮತ್ತು ಪುರಾತತ್ವಶಾಸ್ತ್ರ

ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ನಿಬಂಧ

ಸಂಶೋಧಕ

**ಹೆಚ್.ಆರ್. ಉಮೇಶ**

ಮಾರ್ಗದರ್ಶಕರು

**ಪ್ರೊ. ಹೆಚ್. ಕೃಷ್ಣೇಗೌಡ**






**ಕರ್ನಾಟಕ ಸಂಘ (ರಿ), ಮಂಡ್ಯ.**

**ಬಿಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**

(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

**2007-08**

# ಶ್ರೀರಂಗಪಟ್ಟಣದ ಐತಿಹಾಸಿಕ ಹಿನ್ನೆಲೆ : ಒಂದು ಅಧ್ಯಯನ

ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಶಾಸ್ತ್ರ

ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ನಿಬಂಧ


ಸಂಶೋಧಕ

**ಹೆಚ್.ಆರ್. ಉಮೇಶ**

ಮಾರ್ಗದರ್ಶಕರು

**ಪ್ರೊ. ಹೆಚ್. ಕೃಷ್ಣೇಗೌಡ**











**ಕರ್ನಾಟಕ ಸಂಘ (ರಿ), ಮಂಡ್ಯ.**

**ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**

(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

**2007-08**

# ಮಾರ್ಗದರ್ಶಕರ ಪ್ರಮಾಣ ಪತ್ರ

'ಶ್ರೀರಂಗಪಟ್ಟಣದ ಐತಿಹಾಸಿಕ ಹಿನ್ನೆಲೆ : ಒಂದು ಅಧ್ಯಯನ ' ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಶಾಸ್ತ್ರ ಎಂ.ಫಿಲ್. ಪದವಿಗಾಗಿ ಶ್ರೀ ಹೆಚ್.ಆರ್. ಉಮೇಶ್ ಅವರು ನನ್ನ ಮಾರ್ಗ ದರ್ಶನದಲ್ಲಿ ಸಿದ್ದಪಡಿಸಿದ್ದಾರೆ. ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಮಂಡ್ಯ
ದಿನಾಂಕ: 10-9-2008

(ಪ್ರೊ. ಹೆಚ್. ಕೃಷ್ಣೇಗೌಡ)
ಆಯ್ಕೆ ಶ್ರೇಣಿ ಇತಿಹಾಸ ಉಪನ್ಯಾಸಕರು
ಮಹಿಳಾ ಸರ್ಕಾರಿ ಕಾಲೇಜು,
ಮಂಡ್ಯ.

# ಸಂಶೋಧಕನ ಪ್ರಮಾಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2007-08 ನೇ ಸಾಲಿಗೆ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಶಾಸ್ತ್ರದ ಎಂ.ಫಿಲ್.ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು 'ಶ್ರೀರಂಗಪಟ್ಟಣದ ಐತಿಹಾಸಿಕ ಹಿನ್ನೆಲೆ ಒಂದು ಅಧ್ಯಯನ' ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಪ್ರೊ, ಹೆಚ್. ಕೃಷ್ಣೇಗೌಡ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

H.R. Umesha

(ಹೆಚ್.ಆರ್. ಉಮೇಶ್)

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಶಾಸ್ತ್ರ ವಿಭಾಗದ
ಎಂ.ಫಿಲ್. ಅಭ್ಯರ್ಥಿ,
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ,
ಕರ್ನಾಟಕ ಸಂಘ (ರಿ), ಮಂಡ್ಯ.

ದಿನಾಂಕ : 10-09-2008
ಸ್ಥಳ : ಮಂಡ್ಯ

# ಶ್ರೀರಂಗಪಟ್ಟಣದ ಐತಿಹಾಸಿಕ ಹಿನ್ನಲೆ – ಒಂದು ಅಧ್ಯಯನ

**ಅಧ್ಯಾಯ 1: ಪೀಠಿಕೆ**

- ಅಧ್ಯಯನದ ಸ್ವರೂಪ
- ವ್ಯಾಪ್ತಿ
- ಆಕರಗಳು

**ಅಧ್ಯಾಯ 2:**

- ಭೌಗೋಳಿಕ ಪರಿಸರ
- ಪೌರಾಣಿಕ ಮತ್ತು ಐತಿಹಾಸಿಕ ಹಿನ್ನಲೆ ಕ್ರಿ.ಶ. 1336ರ ವರೆಗೆ

**ಅಧ್ಯಾಯ 3: ರಾಜಕೀಯ ಇತಿಹಾಸ**

- ವಿಜಯನಗರ ಅರಸರ ಸಾಮಂತರ ಆಳ್ವಿಕೆ
- ಮೈಸೂರು ಒಡೆಯರ ಆಳ್ವಿಕೆ
- ದಳವಾಯಿಗಳ ಆಳ್ವಿಕೆ
- ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಆಳ್ವಿಕೆ

**ಅಧ್ಯಾಯ 4: ಸಾಂಸ್ಕೃತಿಕ ಬೆಳವಣಿಗೆ**

- ಕಲೆ ಮತ್ತು ವಾಸ್ತುಶಿಲ್ಪ
- ಧಾರ್ಮಿಕ ಕಟ್ಟಡಗಳು
- ಧರ್ಮೇತರ ಕಟ್ಟಡಗಳು
- ಹಬ್ಬಹರಿದಿನಗಳು
- ನವರಾತ್ರಿ ಉತ್ಸವಗಳು
- ಲಲಿತಕಲೆಗಳು – ಸಂಗೀತ, ನೃತ್ಯ, ಆಟಪಾಠಗಳು

**ಅಧ್ಯಾಯ 5: ಉಪಸಂಹಾರ**

- ಅನುಬಂಧಗಳು
- ಗ್ರಂಥಗಳು
- ರೇಖಾಚಿತ್ರಗಳು
- ಭೂಪಟಗಳು
- ಛಾಯಾಚಿತ್ರಗಳು

# ಅಧ್ಯಾಯ–1
## ಪೀಠಿಕೆ

ಕರ್ನಾಟಕ ಇತಿಹಾಸದಲ್ಲಿ ಶ್ರೀರಂಗಪಟ್ಟಣವನ್ನು ಅವಲೋಕಿಸಿದಾಗ ನಮಗೆ ಅಲ್ಲಿನ ಗತಕಾಲದ ವೈಭವದ ಚಿಹ್ನೆಗಳು ಗೋಚರಿಸುತ್ತವೆ. ಶ್ರೀರಂಗಪಟ್ಟಣ ಪ್ರಾಚೀನ ಮತ್ತು ಮಧ್ಯಕಾಲೀನ ಯುಗದಲ್ಲಿ ಬೇರೆ ಬೇರೆ ರಾಜವಂಶಸ್ಥರ ರಾಜಧಾನಿಯಾಗಿ ಮೆರೆದು ಸುಮಾರು 4 ಶತಮಾನಗಳ ಕಾಲ ಭವ್ಯವಾದ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆ ಹೊಂದಿದ್ದ ಈ ನಗರ ವಿಜಯನಗರ ಸಾಮ್ರಾಟರ ಸಾಮಂತರಿಗೆ, ವೈಸ್ರಾಯಿಗಳಿಗೆ, ಮೈಸೂರು ಒಡೆಯರಿಗೆ ಹಾಗೂ ಹೈದರಾಲಿ–ಟಿಪ್ಪುಸುಲ್ತನರಿಗೆ ರಾಜಧಾನಿಯಾಗಿ ಅಂತರರಾಷ್ಟ್ರೀಯ ಖ್ಯಾತಿಯನ್ನು ಹೊಂದಿದ್ದಿತು. ಇದರ ಕುರುಹಾಗಿ ಕೋಟೆಗಳು, ಡಂಜನ್ನುಗಳು, ಅರಮನೆ, ಮದ್ದುಗುಂಡಿನ ಉಗ್ರಾಣಗಳು, ದೇವಾಲಯಗಳು, ಮಸೀದಿಗಳು ಅದರ ಗತವೈಭವದ ಬಗ್ಗೆ ಸದಾ ಬೆಳಕು ಚೆಲ್ಲುತ್ತದೆ. ಇಲ್ಲಿನ ಶ್ರೀರಂಗದೇವಾಲಯ ದ್ರಾವಿಡಶೈಲಿಯಲ್ಲಿದ್ದು ಐತಿಹಾಸಿಕ ಹಿನ್ನಲೆಯನ್ನು ಹೊಂದಿದೆ. ಶ್ರೀರಂಗಪಟ್ಟಣ ಕೇವಲ ರಾಜಕೀಯ ಚಟುವಟಿಕೆ ಕೇಂದ್ರವಾಗಿರದೆ ಸಾಂಸ್ಕೃತಿಕ ಬೆಳವಣಿಗೆಗೂ ಕೇಂದ್ರವಾಗಿತ್ತು. ಇದರ ಬಗ್ಗೆ ಅಲ್ಲಲ್ಲಿ ಸಣ್ಣಪುಟ್ಟ ಕಾರ್ಯಗಳು ನಡೆದಿದ್ದರೂ ಅಲ್ಲಿನ ಪೂರ್ಣ ಪ್ರಮಾಣದ ಐತಿಹಾಸಿಕ ಹಿನ್ನಲೆಯ ಬಗ್ಗೆ ಒಂದು ಸಮಗ್ರವಾದ ಚಿತ್ರಣವನ್ನು ನೀಡಲಾಗಿಲ್ಲ. ಈ ಹಿನ್ನಲೆಯಲ್ಲಿ ಪ್ರಸ್ತುತ ಅಧ್ಯಾಯವನ್ನು ನಿರೂಪಿಸಲಾಗಿದೆ.

### ಅಧ್ಯಯನದ ಸ್ವರೂಪ

ಕರ್ನಾಟಕದ ಸಾಂಸ್ಕೃತಿಕ ವೈವಿಧ್ಯತೆ ಅಲ್ಲಿನ ವಿಶಿಷ್ಟವಾದ ಪ್ರಾದೇಶಿಕತೆಗಳಿಗನುಸಾರವಾಗಿ ಬೆಳೆದು ಬಂದಿದೆ. ಉದಾ. ಉತ್ತರ ಕರ್ನಾಟಕ ಸಂಸ್ಕೃತಿ, ಕರಾವಳಿ ಸಂಸ್ಕೃತಿ, ದಕ್ಷಿಣ ಕರ್ನಾಟಕದ ಸಂಸ್ಕೃತಿ ಎಂಬ ವಿಭಾಗಗಳು ಕಾಣಸಿಗುತ್ತವೆ. ಅದೇ ರೀತಿ ಕರ್ನಾಟಕದ ಪ್ರಸಿದ್ಧ ಐತಿಹಾಸಿಕ ಸ್ಥಳಗಳೂ ತಮ್ಮದೇ ಆದ ರೀತಿಯಲ್ಲಿ ವೈಶಿಷ್ಟ್ಯಪೂರ್ಣವಾಗಿ ವೈಶಿಷ್ಟ್ಯತೆಗಳನ್ನು ವ್ಯಕ್ತಪಡಿಸಿದ ಹಾಗೇ ವೈವಿದ್ಯತೆಯನ್ನು ವ್ಯಕ್ತಪಡಿಸುವಾಗ ಏಕತೆಗೆ ಭಂಗ ಬಂದಿಲ್ಲ. ಎಲ್ಲಕ್ಕಿಂತ ಮಿಗಿಲಾಗಿ ವಿಶಾಲವಾದ ಭಾರತೀಯ ಸಂಸ್ಕೃತಿಯ ಮೌಲ್ಯಗಳನ್ನೇ ಈ ಸ್ಥಳದ ಇತಿಹಾಸಗಳು ವ್ಯಕ್ತಪಡಿಸಿರುವಂತೆ ತೋರುತ್ತದೆ. ಸಹನೆ, ಸಹಬಾಳ್ವೆ ಮತ್ತು ಸಮನ್ವಯಗಳಂತಹ ಪ್ರಾಚೀನ ಭಾರತೀಯ ಮೌಲ್ಯಗಳನ್ನು ಕನ್ನಡನಾಡಿನ ಐತಿಹಾಸಿಕ ಸ್ಥಳಗಳು ಪ್ರತಿಪಾದಿಸಿದ ಐಹೊಳೆ, ಬಾದಾಮಿ, ಪಟ್ಟದ ಕಲ್ಲು, ಬನವಾಸಿ, ತಲಕಾಡು, ಟಿ.ನರಸೀಪುರ, ಸೋಮನಾಥಪುರ, ಕಲ್ಯಾಣ, ಬೇಲೂರು,

ಹಳೇಬೀಡು ಮತ್ತು ಇದೇ ತರಹದ ಇನ್ನೂ ಅನೇಕ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಸ್ಥಳಗಳು ಕನ್ನಡನಾಡಿನಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ದೊರೆಯುತ್ತವೆ. ಅಂತಹ ಪಟ್ಟಿಗೆ ಶ್ರೀರಂಗಪಟ್ಟಣವನ್ನು ಸೇರಿಸಲೇಬೇಕು. ಏಕೆಂದರೆ, ಶ್ರೀರಂಗಪಟ್ಟಣವು ಕನ್ನಡನಾಡಿನ ಇತಿಹಾಸದಲ್ಲಿ ತಮ್ಮದೇ ಆದ ವೈಶಿಷ್ಟ್ಯಗಳಿಂದ ಕೂಡಿ ಇತಿಹಾಸದಲ್ಲಿ ಮೆರೆದು ಇಂದೂ ಸಹ ಮುಸುಕಾಗಿದ್ದರೂ ತನ್ನ ಹಿಂದಿನ ಹಿರಿಮೆಕರಿಮೆಗಳನ್ನು ಅಲ್ಪಸ್ವಲ್ಪವಾದರೂ ಉಳಿಸಿಕೊಂಡು ಬಂದಿದೆ.

ಇಂತಹ ಐತಿಹಾಸಿಕ ಪರಂಪರೆಯ ಸ್ಥಳಗಳ ಇತಿಹಾಸವನ್ನು ನಾವು ಏಕೆ ಸಂಶೋಧನೆಯ ವಸ್ತುವನ್ನಾಗಿ ಆಯ್ಕೆ ಮಾಡಿಕೊಳ್ಳಬೇಕು? ಇದಕ್ಕೆ ಉತ್ತರವಿಷ್ಟೇ, ಯಾವುದೇ ನಾಡಿನ ಇತಿಹಾಸ ಮತ್ತು ಸಂಸ್ಕೃತಿ ಒಂದು ನಿರ್ದಿಷ್ಟವಾದ ಭೌಗೋಳಿಕ ನೆಲೆ ಅಥವಾ ಸ್ಥಳಕ್ಕೆ ಸೀಮಿತವಾಗಿರುತ್ತದೆ. ಭೂಗೋಳದ ಚೌಕಟ್ಟಿಲ್ಲದೆ ಒಂದು ಸಂಸ್ಕೃತಿಯ ಅಧ್ಯಯನ ತಳಪಾಯವಿಲ್ಲದ ಕಟ್ಟಡ ದಂತಾಗುತ್ತದೆ. ಆದುದರಿಂದ ಒಂದು ನಿರ್ದಿಷ್ಟ ಕಾಲದಲ್ಲಿ ಮತ್ತು ಒಂದು ನಿರ್ದಿಷ್ಟ ಸ್ಥಳದಲ್ಲಿ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಘಟನೆಗಳು ಹೇಗೆ ಸಂಬಂಧಿಸಿದವು ಎಂಬುದನ್ನು ತಿಳಿದುಕೊಳ್ಳುವ ಕುತೂಹಲ ಆಸಕ್ತರಾದ ಎಲ್ಲಾ ಸಂಶೋಧಕರಿಗೂ ಸಹಜವಾಗಿ ಇರುತ್ತದೆ. ಘಟನೆಗಳು ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ನಡೆಯುವುದು ಭೌಗೋಳಿಕ ಪರಿಸರದಲ್ಲಿ ಎಂಬುದನ್ನು ಒಪ್ಪಿದರೆ ಒಂದು ಐತಿಹಾಸಿಕ ಸ್ಥಳದ ಅಧ್ಯಯನದ ಮಹತ್ವ ಅರ್ಥವಾಗುತ್ತದೆ. ಈ ದೃಷ್ಟಿಯಿಂದ ಶ್ರೀರಂಗ ಪಟ್ಟಣದ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಬೆಳವಣಿಗೆಗಳ ಮಹತ್ವದ ಅಧ್ಯಯನವನ್ನು ಇಲ್ಲಿ ಪರಿಕಲ್ಪಿಸಿಕೊಳ್ಳಲಾಗಿದೆ.

ಶ್ರೀರಂಗಪಟ್ಟಣ ಸ್ಥಳೀಯ ಅಧ್ಯಯನವನ್ನೇ ಏಕೆ ಆಯ್ಕೆ ಮಾಡಿಕೊಳ್ಳಲಾಯಿತು ಎಂಬ ಪ್ರಶ್ನೆ ಹೇಳುವುದು ಸಹಜ. ಅದಕ್ಕೆ ಉತ್ತರ ಹೀಗಿದೆ: ತಲಕಾಡು, ಐಹೊಳೆ, ಪಟ್ಟದಕಲ್ಲು, ಬಾದಾಮಿ, ಹಳೇಬೀಡು, ಬನವಾಸಿ, ವಿಜಯನಗರ ಮೊದಲಾದ ಪ್ರಧಾನವಾಗಿದ್ದ ರಾಜಕೀಯ ನೆಲೆಯಾಗಿದ್ದ ನಗರಗಳು ಕ್ರಮೇಣ ತನ್ನ ಹಿಂದಿನ ಘನತೆಯನ್ನು, ವೈಭವವನ್ನು ಮತ್ತು ಶಕ್ತಿಯನ್ನು ಕಳೆದುಕೊಂಡು ಕುಗ್ರಾಮಗಳಾಗಿವೆ. ಆದರೆ ಶ್ರೀರಂಗಪಟ್ಟಣ ರಾಜ್ಯದ ರಾಜಧಾನಿಯ ಅಸ್ತಿತ್ವವನ್ನು ಕಳೆದುಕೊಂಡರೂ, ಇಂದೂ ಸಹ ಪ್ರಾಚೀನತೆ ಮತ್ತು ಆಧುನಿಕತೆ ಎರಡನ್ನು ತನ್ನಲ್ಲಿ ಸಮನ್ವಯ ಗೊಳಿಸಿಕೊಂಡು ಇಂದೂ ಸಹ ಜೀವಂತವಾಗಿ ಕನ್ನಡನಾಡಿನಲ್ಲಿ ಉಳಿದಿರುವುದರಿಂದ ಸಂಶೋಧಕನ ಆಸಕ್ತಿ ಅತ್ತ ಕಡೆ ಆಕರ್ಷಿಸಿದರೆ ಆಶ್ಚರ್ಯವಿಲ್ಲ.

ಎರಡನೆಯದಾಗಿ, ಬೇರೆ ಅನೇಕ ಐತಿಹಾಸಿಕ ಸ್ಥಳಗಳಿಗಿಂತ ಶ್ರೀರಂಗಪಟ್ಟಣ ತನ್ನ ವಿಶಿಷ್ಟತೆಗಳಿಂದ ಸಂಶೋಧಕರ ಕುತೂಹಲವನ್ನು ಕೆರಳಿಸುತ್ತದೆ. ಇಲ್ಲಿನ ರಾಜಕೀಯ ಚರಿತ್ರೆಯಾಗಲಿ ಅಥವಾ ಇಲ್ಲಿನ ದೇವಾಲಯಗಳು ರೋಮಾಂಚನವನ್ನುಂಟು ಮಾಡುತ್ತವೆ. ಅಘ್ನಾತವಾದ ಅಸ್ಥಿತ್ವ ದಿಂದ ಅಂತರ ರಾಷ್ಟ್ರೀಯ ಭೂಪಟದಲ್ಲಿ ಒಂದು ಕಾಲಕ್ಕೆ ಉನ್ನತ ಸ್ಥಾನವನ್ನು ಗಳಿಸಿಕೊಂಡಿದ್ದ ಶ್ರೀರಂಗಪಟ್ಟಣ ಸಂಶೋಧನೆಗೆ ಅತ್ಯಂತ ಯೋಗ್ಯವಾದ ವಸ್ತುವಾಗಿ ತೋರುತ್ತದೆ. ಅಲ್ಲದೆ ಇಂದಿನ ದೃಷ್ಟಿಯಲ್ಲಿ ಸಣ್ಣದಾಗಿ ತೋರುವ ಶ್ರೀರಂಗಪಟ್ಟಣವೆಂಬ ಈ ಸ್ಥಳದಲ್ಲಿ ದಕ್ಷಿಣ ಭಾರತದ ಪ್ರಾದೇಶಿಕ ಸಂಸ್ಕೃತಿಗಳ ಬೇಟಿ ಮತ್ತು ಮಿಲನವಾಗಿರುವುದು ಸಂಶೋಧನೆಯ ಅಧ್ಯಯನಕ್ಕೆ ಮತ್ತೊಂದು ಆಕರ್ಷಣೆ. ಕೊನೆಯದಾಗಿ ಶ್ರೀರಂಗಪಟ್ಟಣ ವೈವಿಧ್ಯ ರೀತಿಯ ವಾಸ್ತುಶಿಲ್ಪಗಳನ್ನು ತನ್ನೊಳಗೆ ಹುದುಗಿಸಿಕೊಂಡಿರುವುದು ಯಾರನ್ನಾದರೂ ಸಂಶೋಧನೆಗೆ ತನ್ನತ್ತ ಕೈಬೀಸಿ ಕರೆದರೆ ಆಶ್ಚರ್ಯವಿಲ್ಲ. ಈ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಪ್ರಸ್ತುತ ಅಧ್ಯಯನದ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

## ಅಧ್ಯಯನದ ವ್ಯಾಪ್ತಿ

ಈ ಅಧ್ಯಯನವನ್ನು 5 ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಒಂದನೇ ಅಧ್ಯಾಯವು ಪೀಠಿಕೆ ಮತ್ತು ಸ್ವರೂಪವನ್ನು ಕುರಿತದ್ದಾಗಿದೆ. ಇದನ್ನು ಈಗಾಗಲೇ ವಿವರಿಸಲಾಗಿದೆ. ಇದರಲ್ಲಿ ಪ್ರಮುಖವಾಗಿ ಪ್ರಸ್ತುತ ಸಂಶೋಧನೆಯ ವಿಷಯುವನ್ನು ಆಯ್ಕೆ ಮಾಡಿಕೊಂಡಿರುವುದಕ್ಕೆ ಕಾರಣ ಗಳನ್ನು ಸ್ಪಷ್ಟವಾಗಿ ವಿವರಿಸಲಾಗಿದೆ. ಎರಡನೆಯದಾಗಿ ವ್ಯಾಪ್ತಿಯನ್ನು ಈಗ ಚರ್ಚಿಸುತ್ತಾ ಇದ್ದೇವೆ, ಮೂರನೇಯದಾಗಿ ಆಕರಗಳನ್ನು ಈ ಅಧ್ಯಾಯದಲ್ಲಿ ಪರಿಚಯಿಸಲಾಗುತ್ತದೆ.

ಎರಡನೇ ಅಧ್ಯಾಯವು ಇತಿಹಾಸದ ಬೆನ್ನಲುಬಾಗಿರುವ ಭೌಗೋಳಿಕ ಅಂಶಗಳು, ಪೌರಾಣಿಕ ಹಿನ್ನಲೆ ಮತ್ತು ಐತಿಹಾಸಿಕ ಹಿನ್ನಲೆಯನ್ನು ಸ್ಥೂಲವಾಗಿ ವಿವರಿಸಲಾಗಿದೆ. ಮೂರನೇ ಅಧ್ಯಾಯದಲ್ಲಿ ಯಾವುದೇ ಸ್ಥಳದ, ಪ್ರದೇಶದ, ರಾಜ್ಯದ ಅಥವಾ ರಾಷ್ಟ್ರದ ಇತಿಹಾಸಕ್ಕೆ ಬೆನ್ನಲುಬಿನಂತೆ ಇರಬೇಕಾದುದು ಅಲ್ಲಿನ ರಾಜಕೀಯ ಇತಿಹಾಸ, ಎರಡು ಕಾರಣಗಳಿಗಾಗಿ ರಾಜಕೀಯ ಇತಿಹಾಸ ಪ್ರಾಧಾನ್ಯತೆಯನ್ನು ಪಡೆದುಕೊಂಡಿದೆ. ಒಂದನೆಯದಾಗಿ, ರಾಜಕೀಯ ಶಕ್ತಿ ಒಂದು ಸ್ಥಳದಲ್ಲಿ ಶಾಂತಿ ಮತ್ತು ಶಿಸ್ತನ್ನು ಏರ್ಪಡಿಸುವಲ್ಲಿ ಮಹತ್ತರ ಪಾತ್ರ ವಹಿಸುತ್ತದೆ. ಎರಡನೇಯದಾಗಿ ಅಲ್ಲಿಯ ರಾಜಕೀಯ ಶಕ್ತಿಯಲ್ಲಿ ಪೋಷಕಶಕ್ತಿ ಅಂತರ್ಗತವಾಗಿರುತ್ತದೆ. ಇದನ್ನು ಗ್ರಹಿಸಿ ಈ ಅಧ್ಯಾಯದಲ್ಲಿ

ರಾಜಕೀಯ ಇತಿಹಾಸ ಶ್ರೀರಂಗಪಟ್ಟಣದಲ್ಲಿ ವಿವಿಧ ಹಂತಗಳಲ್ಲಿ ವಿಕಾಸ ಹೊಂದಿರುವುದನ್ನು ವಿವರಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಶ್ರೀರಂಗಪಟ್ಟಣವು ಸಾಂಸ್ಕೃತಿಕ ಕೇಂದ್ರವಾಗಿದ್ದು ದೇವಾಲಯಗಳ ನಗರವೆಂದೇ ಪ್ರಸಿದ್ಧಿಯನ್ನು ಪಡೆದಿದೆ. ವಿವಿಧ ಕಾಲದಲ್ಲಿ ಶ್ರೀರಂಗಪಟ್ಟಣವನ್ನು ಪ್ರಾಂತ್ಯವನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದ ಆಡಳಿತಗಾರರು ಗುಡಿಗೋಪುರಗಳ ನಿರ್ಮಾಣ ರಕ್ಷಣೆಗೆ ಕೋಟೆ ಗಳನ್ನು ಕಟ್ಟಿಸಿದ್ದಾರೆ. ಅಲ್ಲದೆ ನವರಾತ್ರಿ, ಉತ್ಸವಗಳು, ಹಬ್ಬ ಹರಿದಿನಗಳು, ಲಲಿತಕಲೆಗಳು, ಸಂಗೀತ, ನೃತ್ಯ, ಆಟಪಾಠಗಳು ಇಲ್ಲಿ ಆಚರಿಸಲ್ಪಡುತ್ತಿದ್ದವು. ಈ ನಿಟ್ಟಿನಲ್ಲಿ ಅವುಗಳ ಬಗ್ಗೆ ಸ್ಥೂಲವಾಗಿ ನಿರೂಪಿಸಲಾಗಿದೆ. ಐದನೇ ಅಧ್ಯಾಯ ಉಪಸಂಹಾರ ರೂಪದಲ್ಲಿದ್ದು ಒಟ್ಟು ಅಧ್ಯಾಯದಿಂದ ವ್ಯಕ್ತವಾಗುವ ಸಾಮಾನ್ಯ ತೀರ್ಮಾನಗಳನ್ನು ಇಲ್ಲಿ ನೀಡಲಾಗಿದೆ. ಅನಂತರ ಗ್ರಂಥಪಟ್ಟಿ, ಅನುಬಂಧಗಳನ್ನು ನೀಡಲಾಗಿದೆ.

ಒಟ್ಟಿನಲ್ಲಿ ಪ್ರಸ್ತುತ ಅಧ್ಯಯನದ ಉದ್ದೇಶ ಶ್ರೀರಂಗಪಟ್ಟಣ ಇತಿಹಾಸವು ಐತಿಹಾಸಿಕವಾಗಿ ಕರ್ನಾಟಕದ ಒಂದು ಪ್ರಸಿದ್ಧ ಕೇಂದ್ರವಾಗಿ ನೀಡಿದ ಕೊಡುಗೆಗಳನ್ನು ಸ್ಥೂಲವಾಗಿ ವಿವೇಚಿಸುವುದಾಗಿದೆಯೇ ವಿನಃ ಅದರ ಎಲ್ಲಾ ಸ್ತರಗಳ ವಿವರವಾದ ಮತ್ತು ಅತೀ ಸೂಕ್ಷ್ಮವಾದ ಅಧ್ಯಯನದ ಇದರ ಗುರಿಯಲ್ಲ. ಏಕೆಂದರೆ ಶ್ರೀರಂಗಪಟ್ಟಣವು ನೀಡಿದ ಒಂದೊಂದು ಕೊಡುಗೆ ಎಷ್ಟು ವಿಸ್ತಾರ ವಾಗಿದೆ ಎಂದರೆ ಆ ಒಂದೊಂದು ಕೊಡುಗೆಯನ್ನು ಪ್ರತ್ಯೇಕ ಸಂಶೋಧನಾ ವಿಷಯವನ್ನಾಗಿಸಿ ಕೊಂಡು ಮಹಾಪ್ರಬಂಧವನ್ನು ಬರೆಯಬಹುದು. ಉದಾ: ಶ್ರೀರಂಗಪಟ್ಟಣ ವಲಯದ ಆರ್ಥಿಕ, ಸಾಮಾಜಿಕ, ಅಂಶವನ್ನೇ ಕುರಿತು ವಿಸ್ತಾರವಾದ ಅಧ್ಯಯನವನ್ನು ಮಾಡುವ ಸಾಧ್ಯತೆಗಳಿವೆ. ಆದುದರಿಂದ ಇಲ್ಲಿ ಮೇಲಿನ ವಿಷಯಗಳಿಗೆ ಸಂಬಂಧಿಸಿದಂತೆ ಸಂಗ್ರಹವಾಗಿ ಶ್ರೀರಂಗಪಟ್ಟಣದ ಕೊಡುಗೆಯನ್ನು ಒಟ್ಟಾರೆ ಪರಿಚಯಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

**ಆಕರಗಳು**

ಶ್ರೀರಂಗಪಟ್ಟಣದ ಐತಿಹಾಸಿಕ ಹಿನ್ನಲೆ ಮತ್ತು ಸಾಂಸ್ಕೃತಿಕ ಅಧ್ಯಯನಕ್ಕೆ ಆಕರಗಳು ವೈವಿಧ್ಯಮಯವಾಗಿವೆ. ಅವುಗಳ ಪೈಕಿ ಪ್ರಧಾನವಾದ ಆಕರಗಳೆಂದರೆ ಶಾಸನಗಳು: ಶಿಲಾಶಾಸನ ಗಳು ಮತ್ತು ತಾಮ್ರ ಶಾಸನಗಳು. ಶ್ರೀರಂಗಪಟ್ಟಣದಲ್ಲಿ ಎರಡು ರೀತಿಯ ಶಾಸನಗಳು

ದೊರೆಯುತ್ತವೆ. ಅಗ್ರಹಾರ ಮತ್ತು ದೇವಾಲಯಗಳಿಗೆ ಸಂಬಂಧಿಸಿದಂತೆ ಪ್ರಧಾನವಾಗಿ ದೊರೆಯುವ ಶಾಸನಗಳು ತಾಮ್ರ ಶಾಸನಗಳು ಎಂದು ಹೇಳಬಹುದು. ವಿಜಯನಗರದ ಅರಸರು ಮತ್ತು ಒಡೆಯರು ಶಿಲಾ ಶಾಸನಗಳನ್ನು ಹಾಕಿಸಿದ್ದಾರೆ. ಹೆಚ್ಚಿನ ಶಾಸನ ದಾನಶಾಸನಗಳಾಗಿವೆ.

**ದಾನಶಾಸನಗಳನ್ನು ೩ ವಿಧಗಳಾಗಿ ವಿಂಗಡಿಸಬಹುದು.**

1) ವಿಜಯನಗರದ ಅರಸರು ಮತ್ತು ಒಡೆಯರು ನೀಡಿದ ದಾನ ಶಾಸನಗಳು.
2) ಅರಸರ ಮಂತ್ರಿಗಳು, ದಂಡನಾಯಕರು ಅಥವಾ ನಾಯಕರು ಅಥವಾ ಇತರ ಸಣ್ಣಪುಟ್ಟ ಅಧಿಕಾರಿಗಳು ನೀಡಿದ ದಾನಗಳನ್ನು ತಿಳಿಸುವ ಶಾಸನಗಳು.
3) ಪ್ರಜೆಗಳು ನೀಡಿದ ದಾನಗಳ ದಾಖಲೆಯ ಶಾಸನಗಳು.

ಶ್ರೀರಂಗಪಟ್ಟಣದ ಶಾಸನಗಳನ್ನು ಮತಧರ್ಮಗಳಿಗನುಸಾರವಾಗಿಯೂ ವಿಂಗಡಿಸಬಹುದು.

1) ಶ್ರೀ ವೈಷ್ಣವ ದಾನಶಾಸನಗಳು.
2) ವೈಷ್ಣವರ ದಾನಶಾಸನಗಳು
3) ಜೈನರ ದಾನಶಾಸನಗಳು
4) ಶಾಕ್ತರ ದಾನಶಾಸನಗಳು
5) ಜಾನಪದ ದೇವತೆಗಳಿಗೆ ನೀಡಿದ ದಾನಶಾಸನಗಳು
6) ಇಸ್ಲಾಂ ಧರ್ಮದ ಅನುಯಾಯಿಗಳ ಶಾಸನಗಳು

ಶ್ರೀರಂಗಪಟ್ಟಣದ ಶಾಸನಗಳು ಅನೇಕ ವಿಷಯಗಳನ್ನು ತಿಳಿಸುತ್ತವೆ. ರಾಜಕೀಯ ವಿಷಯಗಳಿಗೆ ಸಂಬಂಧಿಸಿದಂತೆ, ರಾಜರ ಹೆಸರು, ಬಿರುದಾವಳಿ, ವಂಶಾವಳಿ, ಅಧಿಕಾರವರ್ಗ, ಆಡಳಿತ ವಿಭಾಗಗಳು ಮತ್ತು ತೆರಿಗೆಗೆ ಸಂಬಂಧಿಸಿದ ವಿಷಯಗಳನ್ನು ದಾಖಲಿಸುತ್ತವೆ.

ಅದೇ ರೀತಿ ಶ್ರೀರಂಗಪಟ್ಟಣದ ಕೋಟೆಯ ಒಳಗಿದ್ದ ರಂಗನಾಥಸ್ವಾಮಿ ಮತ್ತು ಗಂಗಾಧರೇಶ್ವರಸ್ವಾಮಿ ದೇವಾಲಯಗಳಲ್ಲಿ ನಡೆಯುತ್ತಿದ್ದ ಅಂಗಭೋಗ, ರಂಗಭೋಗ, ಅಮೃತಪಡಿ ಮತ್ತು ರಥೋತ್ಸವಗಳ ಬಗೆಗೆ ಶಾಸನಗಳು ಅನೇಕ ವಿವರಗಳನ್ನು ನೀಡುತ್ತವೆ. ಇಸ್ಲಾಂ ಧರ್ಮದ ಅನುಯಾಯಿಯಾಗಿದ್ದ ಟಿಪ್ಪುಸುಲ್ತಾನರು ಶ್ರೀರಂಗಪಟ್ಟಣದ ರಂಗನಾಥಸ್ವಾಮಿಗೆ ನೀಡಿದ ದಾನದ

ವಿಷಯ ತಿಳಿದುಬರುವುದು. ಶಾಸನಗಳಿಂದಲೇ ಅದೇ ರೀತಿ ಶ್ರೀರಂಗಪಟ್ಟಣದ ಒಳಗಿರುವ ಮಸೀದಿಗೆ ಸಂಬಂಧಪಟ್ಟ ಅನೇಕ ಶಾಸನಗಳು ಅಲ್ಲಿನ ಪರಿಸರದ ಇಸ್ಲಾಂ ಧರ್ಮದ ಅನುಯಾಯಿಗಳ ನಂಬಿಕೆಗಳ ಮೇಲೆ ಬೆಳಕು ಚೆಲ್ಲುತ್ತವೆ. ಒಟ್ಟಿನಲ್ಲಿ ಈ ಪ್ರಬಂಧ ರಚಿಸುವಲ್ಲಿ ಶಾಸನಗಳು ಅತ್ಯಮೂಲ್ಯ ದಾಖಲೆಗಳಾಗಿದ್ದವು ಎಂದು ಹೇಳಬಹುದು.

ಶಾಸನಗಳ ನಂತರ ಸಾಹಿತ್ಯ ಕೃತಿಗಳು ಬಹುಮುಖ್ಯ ಆಧಾರಗಳಾಗುತ್ತವೆ. ಶ್ರೀರಂಗ ಪಟ್ಟಣದ ಪರಿಸರದಲ್ಲಿ ಅನೇಕ ಧಾರ್ಮಿಕ ಮತ್ತು ಲೌಕಿಕ ಕೃತಿಗಳನ್ನು ಅಲ್ಲಿನ ಕವಿಗಳು ಮತ್ತು ಪಂಡಿತರು ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ರಚಿಸಿದರು. ಯಾವ ಗ್ರಂಥಗಳ ಮತ್ತು ಗ್ರಂಥ ಕರ್ತೃಗಳ ಹೆಸರುಗಳನ್ನು ಇಲ್ಲಿ ಪ್ರಧಾನವಾಗಿ ಹೇಳುವುದಿಲ್ಲ. ಸಾಹಿತ್ಯ ಕೃತಿಗಳಲ್ಲಿ ಅನೇಕವು ಐತಿಹಾಸಿಕ ಕೃತಿಗಳಾಗಿವೆ. ಕಂಠೀರವ ನರಸರಾಜ ವಿಜಯ, ಚಿಕ್ಕದೇವರಾಜವಿಜಯ, ಚಿಕ್ಕದೇವರಾಜ ಭಿನ್ನಪಂ, ಚಿಕ್ಕದೇವರಾಜ ವಂಶಾವಳಿ, ಮತ್ತು ಅಪ್ರತಿಮ ವೀರಚರಿತಂಗಳು ಚಾರಿತ್ರಿಕ ಗ್ರಂಥ ಗಳಾಗಿವೆ. ಇವುಗಳು ಶ್ರೀರಂಗಪಟ್ಟಣವನ್ನು ಆಳಿದ ಮೈಸೂರಿನ ಒಡೆಯರ ಬಗ್ಗೆ ಅನೇಕ ವಿಷಯಗಳನ್ನು ತಿಳಿಸುತ್ತವೆ. ಅದೇ ರೀತಿ ಶ್ರೀರಂಗ ಮಹಾತ್ಮೆ ಎಂಬ ಗ್ರಂಥಗಳು ಶ್ರೀರಂಗಪಟ್ಟಣದ ಪೌರಾಣಿಕ ಹಿನ್ನಲೆಯನ್ನು ತಿಳಿಸುತ್ತವೆ. ಶ್ರೀರಂಗಪಟ್ಟಣದಲ್ಲಿ ನಡೆಯುತ್ತಿದ್ದ ಉತ್ಸವದ ವಿವರಗಳು ಸಹ ಸಾಹಿತ್ಯ ಕೃತಿಗಳಿಂದಲೇ ದೊರೆಯುತ್ತವೆ. ಇದಲ್ಲದೆ ಅನೇಕ ವಿಷಯಗಳ ಮೇಲೆ ಪರೋಕ್ಷ ವಾಗಿ ಸಾಹಿತ್ಯ ಕೃತಿಗಳು ಬೆಳಕು ಚೆಲ್ಲುತ್ತವೆ.

ಸಾಹಿತ್ಯ ಕೃತಿಗಳನ್ನು ಬಿಟ್ಟರೆ, ವಿದೇಶಿ ಪ್ರವಾಸಿಗರ ಗ್ರಂಥಗಳು ಈ ಅಧ್ಯಯನಕ್ಕೆ ಸಹಾಯಕವಾಗಿವೆ. ಅವುಗಳ ಪೈಕಿ ಇನ್ನು ಹೆಸರಿಸಬಹುದು. ಸಿನ್ನಾಮಿ ಮತ್ತು ಬುಕ್ಯಾನನ್ ಬರೆದ ಗ್ರಂಥಗಳು ಪ್ರಸ್ತುತ ಅಧ್ಯಯನಕ್ಕೆ ಉತ್ತಮ ಆಕರಗಳಾಗಿವೆ. ಬುಕ್ಯಾನನ್‌ನ ಗ್ರಂಥವಂತೂ ಯಾವ ಆಕರಗಳು ನೀಡದ ಅನೇಕ ವಿವರಗಳನ್ನು ಪ್ರಸ್ತಾಪಿಸುತ್ತದೆ. ಟಿಪ್ಪುವಿನ ಮರಣಾನಂತರ ಶ್ರೀರಂಗ ಪಟ್ಟಣ ಮತ್ತು ಸುತ್ತಮುತ್ತಲಿನಲ್ಲಿ ಪ್ರವಾಸ ಮಾಡಿದ ಬುಕ್ಯಾನನ್ ಉತ್ತಮ ವಿವರಗಳನ್ನು ನೀಡಿದ್ದಾನೆ ಹೀಗೆ ಪ್ರಸ್ತುತ ಪ್ರಬಂಧಕ್ಕೆ ವಿವಿಧ ರೀತಿ ಆಕರಗಳು ಸಹಾಯಕವಾಗಿವೆ.

# ಅಧ್ಯಾಯ-2
# ಭೌಗೋಳಿಕ ಪರಿಸರ, ಪೌರಾಣಿಕ ಮತ್ತು ಐತಿಹಾಸಿಕ ಹಿನ್ನಲೆ
# ಕ್ರಿ.ಶ. 1336ರ ವರೆಗೆ

ಶ್ರೀರಂಗಪಟ್ಟಣ ಮಂಡ್ಯ ಜಿಲ್ಲೆಯ ಒಂದು ತಾಲ್ಲೂಕು ಮತ್ತು ಆಡಳಿತ ಕೇಂದ್ರ. ಇದು ಸಮುದ್ರ ಮಟ್ಟಕ್ಕಿಂತ 711 ಮೀಟರ್ ಎತ್ತರವಾಗಿದೆ. ಇದು ಒಂದು ಸುಂದರ ದ್ವೀಪದಂತಿದ್ದು 5 ಕಿ.ಮೀ ವಿಸ್ತೀರ್ಣವನ್ನು ಹೊಂದಿದೆ. ಉತ್ತರ-ದಕ್ಷಿಣ ಅಗಲವಾಗಿದ್ದು, ಪೂರ್ವ-ಪಶ್ಚಿಮ ಕಿರಿದಾಗುತ್ತಾ ಹೋಗುವ ಈ ನಗರ ಪೂರ್ವ ಮತ್ತು ಆಗ್ನೇಯದಲ್ಲಿ ಮೈಸೂರು ಜಿಲ್ಲೆಯ ತಿರುಮ ಕೂಡಲು ನರಸೀಪುರ, ಪಶ್ಚಿಮ-ನೈರುತ್ಯ ಮತ್ತು ದಕ್ಷಿಣದಲ್ಲಿ ಮೈಸೂರು ತಾಲ್ಲೂಕು, ಉತ್ತರದಲ್ಲಿ ಪಾಂಡವಪುರ ಮತ್ತು ಮಂಡ್ಯ ತಾಲ್ಲೂಕುಗಳಿವೆ. (ಅರಕೆರೆ, ಬೆಳಗೊಳ, ಶ್ರೀರಂಗಪಟ್ಟಣ ಮತ್ತು ಕೆ.ಶೆಟ್ಟಿಹಳ್ಳಿ ಇದರ ಹೋಬಳಿಗಳು) ಸುಮಾರು 97 ಗ್ರಾಮಗಳಿರುವ ಈ ತಾಲ್ಲೂಕಿನ ವಿಸ್ತೀರ್ಣ 346.7 ಚ.ಕಿ.ಮೀ ಇದರ ಜನಸಂಖ್ಯೆ 1673 ರಿಂದ 1704ರ ಅವಧಿಯಲ್ಲಿ ಸುಮಾರು 1,50,000 ರಷ್ಟು ಇದ್ದದ್ದು 1799ರಲ್ಲಿ ನಾಲ್ಕನೇ ಮೈಸೂರು ಯುದ್ಧ ಮುಗಿದು ಮುಸ್ಲಿಂ ಆಡಳಿತ ಕೊನೆಗೊಂಡ ಮೇಲೆ ಜನಸಂಖ್ಯೆಯಲ್ಲಿ ಇಳಿಮುಖವಾಗ ತೊಡಗಿತು. ಈಗಿನ ಜನಸಂಖ್ಯೆ ಸುಮಾರು 25,000 ರಷ್ಟಿದೆ. ಉತ್ತಮ ಹವಾಮಾನದಿಂದ ಕೂಡಿರುವ ಈ ತಾಲ್ಲೂಕಿನ ವಾರ್ಷಿಕ ಸರಾಸರಿ ಮಳೆ ಗರಿಷ್ಟ 810ಮಿ.ಮೀ ಮತ್ತು ಕನಿಷ್ಟ 217.5ಮಿ.ಮೀ. ನಿಂದ ಕೂಡಿರುತ್ತದೆ. ಇಲ್ಲಿನ ಉಷ್ಣಾಂಶ ಗರಿಷ್ಟ 34.50$^{O}$C ದಿಂದ ಕನಿಷ್ಟ 160$^{O}$C ವರೆಗೆ ಕೂಡಿರುತ್ತದೆ.

ಶ್ರೀರಂಗಪಟ್ಟಣ ತನ್ನದೇ ಆದ ಚಾರಿತ್ರಿಕ ಹಿನ್ನಲೆಯನ್ನು ಹೊಂದಿದೆ. ಸ್ಥಳ ಪುರಾಣದ ಪ್ರಕಾರ ಇದಕ್ಕೆ 'ಗೌತಮಕ್ಷೇತ್ರ'ವೆಂದು ಮತ್ತೊಂದು ಹೆಸರಿನಿಂದ ಕರೆಯಲಾಗುತ್ತಿತ್ತು. ಪೂರ್ವದಲ್ಲಿ ಗೌತಮ ಋಷಿ ಇಲ್ಲಿಯ ಆದಿರಂಗನನ್ನು ಪೂಜಿಸಿ ಇಲ್ಲಿ ವಾಸವಾಗಿದ್ದರಿಂದ ಇದಕ್ಕೆ ಗೌತಮಕ್ಷೇತ್ರ ವೆಂದು ಹೆಸರೂ ಬಂದಿದ್ದರೂ, ಇತಿಹಾಸದ ಪುರಾಣಗಳಲ್ಲಿ ಇದರ ಅಂಶ ಅಡಕವಾಗಿದೆ. ಇದರ ಒಳಹೊಕ್ಕು ನೋಡಿದಾಗ, ಪುರಾತನ ಕಾಲದಲ್ಲಿ ಕಾವೇರಿಯು ಈ ಕ್ಷೇತ್ರದಲ್ಲಿ ಮಹಾ ವಿಷ್ಣುವನ್ನು ಕುರಿತು ತಪಸ್ಸು ಮಾಡಿ ಒಲಿಸಿಕೊಂಡಳಂತೆ. ಅದರ ನೆನಪಿಗಾಗಿ ಸ್ವಾಮಿಯು ಸ್ವಯಂ ವ್ಯಕ್ತಿ ಮೂರ್ತಿಯಾಗಿ ಅಲ್ಲಿ ಉದ್ಭವಿಸಿದನು. ಆದರೆ ಅವನ ವಿಗ್ರಹವು ಜನರ ಕಣ್ಣಿಗೆ ಅಗೋಚರವಾಗಿ ವಾಲ್ಮೀಕದಲ್ಲಿ ಮರೆಯಾಯಿತು. ಹಾಗೆಯೇ ಎಷ್ಟೋ ಸಂವತ್ಸರಗಳು ಉರುಳಿ ಹೋದವು. ಒಮ್ಮೆ ಗೌತಮ ಋಷಿಮುನಿ ಸಮಿತಿಯು ತಮ್ಮ ಮೇಲೆ ಹೊರಿಸಿದ್ದ ಗೋಹತ್ಯಾ ದೋಷವನ್ನು ನೀಗಿಸಿ

ಕೊಳ್ಳಲೋಸುಗ ಹಲವು ಪುಣ್ಯಧಾಮಗಳನ್ನು ಸಂದರ್ಶಿಸುತ್ತಾ ಇಲ್ಲಿಗೂ ಬಂದರು. ತುಳಸಿ ವನಾಂತರದಲ್ಲಿದ್ದ ಸ್ವಾಮಿಯನ್ನು ಕಂಡು ಕಾಮಧೇನುವಿನ ಕ್ಷೀರಧಾರೆಯಿಂದ ಅಲ್ಲಿನ ಹುತ್ತವನ್ನು ಕರಗಿಸಿ ವಿಗ್ರಹವನ್ನು ಬೆಳಕಿಗೆ ತಂದರು. ಅನಂತರ ಅದಕ್ಕೆ ಗೌತಮಕ್ಷೇತ್ರವೆಂದು ಹೆಸರಾಯಿತ್ತೆಂದು ಪ್ರತೀತಿ ಇದೆ.

ಮತ್ತೊಂದು ಅಂಶದ ಪ್ರಕಾರ, ಕಾವೇರಿಯು ವಿಷ್ಣುವಿನ ಪಾದಸೇವೆಗಾಗಿ ಅಲ್ಲಿಯೇ ನಿಂತಳು ಅಂದಿನಿಂದ ಭೂವೈಕುಂಠವಾಯಿತು. ಗೌತಮ ಕ್ಷೇತ್ರದಲ್ಲಿ ಕಾವೇರಿಗೆ ಹೆಚ್ಚಿನ ಪ್ರಾಶಸ್ತ್ಯವುಂಟು. ವೈಕುಂಠದ 'ವಿರಜಾ' ಎಂಬ ದಿವ್ಯನದಿಯ ನಿರ್ಮಲತೆ, ಪಾವನತೆಗಳನ್ನು ಭಕ್ತರು ತನನಂಬಿದ ಪಾಪಗಳನ್ನು ತೊಳೆದುಕೊಳ್ಳಲು ಕಾವೇರಿಯಲ್ಲಿ ಬಂದು ನೆಲೆಗೊಳ್ಳುತ್ತಾಳಂತೆ. ಒಮ್ಮೆ ಚಿತ್ರಸೇನಾ ಚಿತ್ರರಥರೆಂಬಿಬ್ಬರು ಗಂಧರ್ವರು ಶಚಿಯನ್ನು ಮೋಹಿಸ ಹೋಗಿ ಇಂದ್ರನಿಂದ ಶಾಪಕ್ಕೀಡಾಗಿ ಭೂಮಿಯಲ್ಲಿ ರಾಕ್ಷಸರಾಗಿ ಹುಟ್ಟಿದರು. ಅವರು ಪೂರ್ಣಿಮೆಯ ದಿನದಂದು ಕಾವೇರಿ ಯಲ್ಲಿ ಮಿಂದು ಶ್ರೀರಂಗನಾಥನ ದರ್ಶನ ಮಾಡಿ, ಶಾಪಮುಕ್ತರಾಗಿ ತಮ್ಮ ದಿವ್ಯಕಾಯವನ್ನು ಮರಳಿ ಪಡೆದರು. ಇವೆಲ್ಲ ಪುರಣೋತ್ತರ ವಿಚಾರಗಳಾದರೂ ಶ್ರೀರಂಗಪಟ್ಟಣಕ್ಕೆ ಗೌತಮ ಋಷಿಯ ಪಾದ ಸ್ಪರ್ಶದಿಂದ ಪುಣ್ಯಕ್ಷೇತ್ರವಾಗಿ ಬೆಳೆದು ಇಂದಿಗೂ ಗೌತಮಕ್ಷೇತ್ರವೆಂದು ಪ್ರಸಿದ್ಧಿಯನ್ನು ಪಡೆದುಕೊಂಡು ಬಂದಿದೆ. ಅಲ್ಲದೆ ಇಂದು ಶ್ರೀರಂಗಪಟ್ಟಣವೆಂದು ಪ್ರಸಿದ್ಧವಾಗಿರುವ ಪಶ್ಚಿಮ ರಂಗ ಕ್ಷೇತ್ರವು ಬಹಳ ಹಳೆಯ ಊರು. ಅದನ್ನು 'ಆದಿರಂಗ ಕ್ಷೇತ್ರ' ವೆಂದು ಪುರಾಣ ಗಳಲ್ಲಿ ತಿಳಿಸಿದೆ. ಆದರೆ ಕೆಲವರು ಅನಂತಶಯನ, ದರ್ಭಶಯನ ಮತ್ತು ಶ್ರೀರಂಗ ಇವುಗಳು ಆದಿ, ಮಧ್ಯ, ಅಂತ್ಯ ರಂಗಕ್ಷೇತ್ರಗಳೆಂದೂ, ಈ ಕ್ಷೇತ್ರವು ಇತ್ತೀಚೆಗೆ ಬೆಳಕಿಗೆ ಬಂದುದೆಂದು ಹೇಳಲಾಗಿದೆ. ಸ್ಕಂದ ಪುರಾಣಾಂತರ್ಗತವಾದ ಅಖಂಡ ಕಾವೇರಿ ಮಹಾತ್ಮೆಯಲ್ಲಿ ಶಿವಕ್ಷೇತ್ರ, ವಿಷ್ಣುಕ್ಷೇತ್ರ ಮುಂತಾದ ಕ್ಷೇತ್ರಗಳನ್ನು ಅವುಗಳ ಮಹಿಮೆಗಳನ್ನು ವಿವರಿಸಲಾಗಿದೆ. ಆದರೆ ಈ ಪಶ್ಚಿಮ ರಂಗಕ್ಷೇತ್ರವನ್ನು ಅದರಲ್ಲಿ ವಿವರಿಸಿಲ್ಲ.[1]

### ಐತಿಹಾಸಿಕ ಹಿನ್ನಲೆ ಕ್ರಿ.ಶ. 1336 ರವರೆಗೆ

ಇಲ್ಲಿಯವರೆಗೆ ಕೆಲವು ಪುರಣೋತ್ತರ ವಿಚಾರಗಳನ್ನು ತಿಳಿದುಕೊಂಡವರಾದರೂ ಕೆಲವು ಚಾರಿತ್ರಿಕ ಅಂಶಗಳು ನಮಗೆ ಗೋಚರಿಸುತ್ತವೆ. ಶ್ರೀರಂಗಪಟ್ಟಣ ಆಯಕಟ್ಟಿನ ಪ್ರದೇಶವಾಗಿದ್ದು ಅನೇಕ ರಾಜವಂಶಗಳು, ಸಾಮಂತರುಗಳು ಆಳ್ವಿಕೆಯನ್ನು ನಡೆಸಿವೆ. ಮುಖ್ಯವಾಗಿ ಗಂಗರು, ಹೊಯ್ಸಳರು, ವಿಜಯನಗರದ ಅರಸರು, ಸಾಮಂತರು, ಮೈಸೂರಿನ ಒಡೆಯರು, ಹೈದರಾಲಿ

ಮತ್ತು ಟಿಪ್ಪು ಸುಲ್ತಾನರು ಹಾಗೂ ಬ್ರಿಟಿಷರಿಗೆ ಒಳಪಟ್ಟಂತೆ ವಿವಿಧ ರಾಜವಂಶಗಳು ಆಳ್ವಿಕೆ ನಡೆಸಿವೆ. ಪೂರ್ವದಲ್ಲಿ ಶ್ರೀರಂಗಪಟ್ಟಣ ದಟ್ಟವಾದ ಕಾಡಿನಿಂದ ಕೂಡಿದ್ದು ಅದು ಒಂದು ಸಣ್ಣ ಊರಾಗಿತ್ತು. ಕ್ರಿ.ಶ. 894ರಲ್ಲಿ ಗಂಗರ ದಂಡನಾಯಕ ತಿರುಮಲಯ್ಯ ಎಂಬುವವನು ಅದನ್ನು ಒಂದು ಪ್ರಾಂತ್ಯವನ್ನಾಗಿ ಮಾಡಿಕೊಂಡು ಅಲ್ಲಿ ಆಳ್ವಿಕೆ ನಡೆಸಿ ದೇವಸ್ಥಾನಗಳು, ಮಂಟಪಗಳನ್ನು ಕಟ್ಟಿಸಿ ಗೌತಮಕ್ಷೇತ್ರವೆಂದು ಪ್ರಸಿದ್ಧಿ ಪಡೆದಿದ್ದ ಶ್ರೀರಂಗಪಟ್ಟಣಕ್ಕೆ 'ಶ್ರೀರಂಗಪುರ' ಎಂದು ನಾಮಕರಣ ಮಾಡಿ ಆಳ್ವಿಕೆ ನಡೆಸತೊಡಗಿದನು.[2] ನಂತರ ಪ್ರವರ್ಧಮಾನಕ್ಕೆ ಬಂದ ಹೊಯ್ಸಳರು ತಮ್ಮ ಅಧೀನಕ್ಕೆ ತೆಗೆದುಕೊಂಡು ಅದನ್ನು ಒಂದು ಅಷ್ಟಗ್ರಾಮವನ್ನಾಗಿ ಪರಿವರ್ತಿಸಿದರು. ಕ್ರಿ.ಶ. 1117ರಲ್ಲಿ ಚೋಳರ ಹಿಡಿತದಿಂದ ತಪ್ಪಿಸಿಕೊಂಡು ರಾಮಾನುಜಾಚಾರ್ಯರು ಅಲೆಯುತ್ತಿದ್ದರು. ಅದೇ ವೇಳೆಗೆ ವೈಷ್ಣವ ಧರ್ಮವನ್ನು ಅವಲಂಬಿಸಿ ವಿಷ್ಣುವರ್ಧನನು ರಾಮಾನುಜಾಚಾರ್ಯರಿಗೆ ಆ ಪ್ರಾಂತ್ಯ (ಅಷ್ಟ ಗ್ರಾಮ)ವನ್ನು ಬಿಟ್ಟುಕೊಟ್ಟು ಆ ಗ್ರಾಮದ ಮೇಲ್ವಿಚಾರಣೆಗಾಗಿ ಹೆಬ್ಬಾರರು ಅಥವಾ ಪ್ರಭುಗಳನ್ನು ನೇಮಿಸಿದರು.[3] ಶ್ರೀರಂಗಪಟ್ಟಣದ ರಂಗನಾಥಸ್ವಾಮಿ ದೇವಸ್ಥಾನದ ಗರ್ಭಗೃಹದ ಹೊರಗೋಡೆಯ ದಕ್ಷಿಣ ತಳಪಾದಿಯ ಕೆಳಪಟ್ಟಿಯಲ್ಲಿ ಕ್ರಿ.ಶ. 1210ಕ್ಕೆ ಸೇರಿರುವ ಒಂದು ಶಾಸನ ದೊರೆಯುತ್ತದೆ. ಈ ಶಾಸನ ಹೊಯ್ಸಳರ ಕಾಲದ್ದಾಗಿದ್ದು ತಮಿಳು ಮತ್ತು ಸಂಸ್ಕೃತ ಭಾಷೆಗಳಲ್ಲಿದೆ. ವೀರಬಲ್ಲಾಳ ದೇವನ ಆಳ್ವಿಕೆಯ ಕಾಲವನ್ನು ಈ ಶಾಸನ ಸೂಚಿಸುತ್ತದೆ. ಆರಂಭದಲ್ಲಿ ವಿಷ್ಣುವನ್ನು ಕುರಿತಂತೆ ಸ್ತುತಿ ಪದ್ಯ ಇದೆ. ಇದರಿಂದ ಶ್ರೀರಂಪಟ್ಟಣವು 12ನೇ ಶತಮಾನದಲ್ಲಿ ಶ್ರೀ ವೈಷ್ಣವರ ನೆಲೆಯಾಗಿ ಇತ್ತೆಂದು ಹೇಳಬಹುದು. ಈ ಶಾಸನವು ಬ್ರಹ್ಮಪುರಂ ಅಥವಾ ಚತುರ್ಮುಖ ನಾರಾಯಣ ಚತುರ್ವೇದಿ-ಮಂಗಳಂ ಎಂಬ ಹೆಸರಿನ ಗ್ರಾಮವನ್ನು ಶ್ರೀರಂಗಪಟ್ಟಣದ ಭಟ್ಟರಿಂದ ಕ್ರಯಕ್ಕೆ ಕೊಂಡುಕೊಂಡು ಸ್ಥಳ ಪ್ರಭುವಾಗಿದ್ದ ವರಂತರು ಪೆರುಮಾನ್ ಎಂಬುವವನು ದಾನ ಕೊಟ್ಟಿದ್ದನ್ನು ಈ ಶಾಸನ ದಾಖಲಿಸುತ್ತದೆ. ಗ್ರಾಮವನ್ನು 65 ವೃತ್ತಿಗಳಾಗಿ ವಿಭಾಗಿಸಿ ಅದರಲ್ಲಿ 33 ವೃತ್ತಿಗಳನ್ನು 88 ಬ್ರಾಹ್ಮಣ ಪಂಡಿತರಿಗೆ ನೀಡಲಾಯಿತು. ದಾನ ನೀಡಿದ ಮೇಲೆ ಗ್ರಾಮದ ಹೆಸರು 'ಅಳಗಿಯ ಪೆರುಮಾಳ್ ಪುರಂ' ಎಂಬುದಾಗಿ ಮಾರ್ಪಟ್ಟಿತು.[4] ಕಾಲಾನಂತರ ಶ್ರೀರಂಗಪಟ್ಟಣ ಪ್ರಾಂತ್ಯ ಕ್ರಿ.ಶ. 1454ರಲ್ಲಿ ನಾಗಮಂಗಲದ ಪ್ರಭು ತಿಮ್ಮಣ್ಣನಿಗೆ ವರ್ಗವಾಗಿ ವಿಜಯನಗರ ಅರಸುಗಳಿಂದ 'ಡಣ್ಣಾಯಕ' ಎಂಬ ಗೌರವವನ್ನು ಸಂಪಾದಿಸಿ, ತನಗೆ ಸಿಕ್ಕಿದ ದ್ರವ್ಯದಿಂದ ಶ್ರೀರಂಪಟ್ಟಣದ ಸುತ್ತ ಭದ್ರವಾದ ಕೋಟೆ, ರಂಗನಾಥ ದೇವಾಲಯದ ಹೊರ ಪ್ರಕಾರದ ಗೋಡೆ, ದೊಡ್ಡಗೋಪುರ ಮತ್ತು ಮಹಾದ್ವಾರಗಳನ್ನು ಕಟ್ಟಿಸಿದನು. ತಿಮ್ಮಣ್ಣನ ವಂಶಸ್ಥರು 1495ರವರೆಗೆ ಆಳಿದರು. ಅನಂತರ ವಿಜಯನಗರದ ಅರಸರ ನೇರ ಆಳ್ವಿಕೆಗೆ ಶ್ರೀರಂಗಪಟ್ಟಣ ಸೇರಿತು.[5]

## ಅಡಿಟಿಪ್ಪಣಿಗಳು

1) ತಿಮ್ಮ ಕವಿ – ಪಶ್ಚಿಮ ರಂಗ ಮಹಾತ್ಮೆ ಮತ್ತು ಚಿಕ್ಕದೇವರಾಜ ವಂಶಾವಳಿ (ಸಂ) ಎಂ.ಪಿ.ಮಂಜಪ್ಪಶೆಟ್ಟಿ, ಕ.ಅ.ಸಂ.ಪು. 37.

2) ತಿಮ್ಮ ಕವಿ – ಪಶ್ಚಿಮ ರಂಗಕ್ಷೇತ್ರ ಮಹಾತ್ಯ ಮತ್ತು ಚಿಕ್ಕದೇವ ರಾಜ ವಂಶಾವಳಿ (ಸಂ) ಎಂ.ಪಿ.ಮಂಜಪ್ಪಶೆಟ್ಟಿ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, 1980 ಪುಟ 37.

3) ಅದೇ, ಪುಟ ; ಎಂ.ಹೆಚ್.ನಾಯಕ್ – ಕನ್ನಡ ವಿಷಯ ವಿಶ್ವಕೋಶ, ಸಂ.1, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು 1979 ಪುಟ 1455.

4) ಇ.ಸಿ.6 (ಎನ್.ಎಸ್) ನಂ.1, 1210 ಎ.ಡಿ.

5) MIR Hussain Ali Khan Kirmani – History of Tipu Sultan (Sec Ed) Calcutta, 1958, p.141.
ತಿಮ್ಮಕವಿ ಪಶ್ಚಿಮ ರಂಗಕ್ಷೇತ್ರ ಮಹಾತ್ಮ್ಯ ಮತ್ತು ಚಿಕ್ಕದೇವರಾಜ ವಂಶಾವಳಿ (ಸಂ) ಎಂ.ಪಿ.ಮಂಜಪ್ಪಶೆಟ್ಟಿ, ಕ.ಅ.ಸಂ. ಮೈಸೂರು 1980 ಪುಟ 37–38.

# ಅಧ್ಯಾಯ-3
# ರಾಜಕೀಯ ಇತಿಹಾಸ

## (ಎ) ವಿಜಯನಗರ ಅರಸರ ಆಳ್ವಿಕೆ

ಶ್ರೀರಂಗಪಟ್ಟಣವು ಎಲ್ಲಾ ದೃಷ್ಟಿಯಿಂದಲೂ ಪ್ರಮುಖ ರಾಜಕೀಯ ಕೇಂದ್ರವಾಗಲು ಅರ್ಹತೆಯನ್ನು ಹೊಂದಿದ್ದಿತು. ಸಂಪನ್ಮೂಲದ ಪೂರೈಕೆ ಸಾಕಷ್ಟು ಇದ್ದಿತು. ನೀರಿನ ಅಭಾವ ಇರಲಿಲ್ಲ. ರಕ್ಷಣೆಯ ದೃಷ್ಟಿಯಿಂದ ಶ್ರೀರಂಗಪಟ್ಟಣ ಒಳ್ಳೆಯ ಆಯಾಕಟ್ಟಿನ ಸ್ಥಾನದಲ್ಲಿದ್ದಿತು. ಶ್ರೀರಂಗಪಟ್ಟಣವು ವಿಜಯನಗರ ಕಾಲದಲ್ಲಿ ಒಂದು ಪ್ರಮುಖ ರಾಜಕೀಯ ಕೇಂದ್ರವಾಗಿ ಪ್ರಸಿದ್ಧಿಯನ್ನು ಪಡೆಯಿತು. ಎಂ.ಹೆಚ್.ಕೃಷ್ಣರವರ ಪ್ರಕಾರ ಕ್ರಿ.ಶ. 15ನೇ ಶತಮಾನದ ಆರಂಭದಲ್ಲಿ ತಿರುಮಲದೇವ ಎಂಬ ಅಕ್ಕಪಕ್ಕದಲ್ಲಿದ್ದ ಪಾಳೇಯಗಾರರು ವಿಜಯನಗರದ ದೇವರಾಯನ ಅನುಮತಿಯಿಂದ ಶ್ರೀರಂಗಪಟ್ಟಣವನ್ನು ಆಕ್ರಮಿಸಿಕೊಂಡು ಅಲ್ಲಿ ಒಂದು ಕೋಟೆಯನ್ನು ಕಟ್ಟಿದನು. ಕಾಲಾನಂತರ ಅರವೀಡು ವಂಶದ ಕಾಲದಲ್ಲಿ ಶ್ರೀರಂಗಪಟ್ಟಣ ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿ ಪ್ರತಿನಿಧಿಯ ಆಡಳಿತ ಕೇಂದ್ರವಾಯಿತು.[1] ಒಟ್ಟಿನಲ್ಲಿ ಶ್ರೀರಂಗಪಟ್ಟಣವು ಸೇರಿಕೊಂಡಂತೆ ಒಂದು ಆಯಾಕಟ್ಟಿನ ಪ್ರದೇಶವನ್ನು ವಿಜಯನಗರ ಕಾಲದಲ್ಲಿ ಗುರುತಿಸಬಹುದು. ಅಧ್ಯಯನದ ಸೌಕರ್ಯದ ದೃಷ್ಟಿಯಿಂದ ಇಂದಿನ ಮಂಡ್ಯ ಜಿಲ್ಲೆಯ ಕೃಷ್ಣರಾಜ ಪೇಟೆ, ಪಾಂಡವಪುರ ಮತ್ತು ಶ್ರೀರಂಗಪಟ್ಟಣ ತಾಲ್ಲೂಕುಗಳ ಶಾಸನಗಳನ್ನು ಈ ದೃಷ್ಟಿಯಿಂದ ಸ್ಥೂಲವಾಗಿ ಅಧ್ಯಯನ ಮಾಡಲಾಗಿದೆ. ಈ ಪ್ರದೇಶದ ಶಾಸನಗಳು ಶ್ರೀರಂಪಟ್ಟಣ ಮತ್ತು ಸುತ್ತಮುತ್ತಲಿನ ಪ್ರದೇಶಗಳೊಡನೆ ವಿಜಯನಗರದ ಚಕ್ರವರ್ತಿಗಳು, ಅಮರನಾಯಕರು ಮತ್ತು ದಂಡನಾಯಕರು ಹಾಗೂ ಇತರ ಆಡಳಿತಗಾರರು ಹೊಂದಿದ್ದ ಸಂಪರ್ಕವನ್ನು ದಾಖಲಿಸುತ್ತವೆ. ಅಂತಹ ಒಂದು ಸಂಕ್ಷಿಪ್ತ ವಿವರಣೆಯನ್ನು ಇಲ್ಲಿ ನಿರೂಪಿಸಬಹುದು.

ಮೇಲುಕೋಟೆಯ ಕ್ರಿ.ಶ. 1369ನೆಯ ವರ್ಷದ ಶಾಸನದ ಪ್ರಕಾರ ಬುಕ್ಕರಾಯ (1) ನ ಆಳ್ವಿಕೆಗೆ ಸೇರಿದ ಮಯಿಲನಹಳ್ಳಿಯ ಕೆರೆಯ ಕೆಳಗಣ ಕುಂಬಾರರ ಕಟ್ಟೆಯ ಕಾಡಿನ ಭೂಮಿ ತಿರುನಾರಾಯಣಪುರದ ನಾರಾಯಣ ದೇವರಿಗೆ ಸೇರಿದ್ದೂ, ಆ ದೇವಸ್ಥಾನದ ಶ್ರೀ ವೈಷ್ಣವರು ಆ ಭೂಮಿಯನ್ನು ಉಳುತ್ತಿದ್ದವರಿಗೆ ಬಿಟ್ಟುಕೊಟ್ಟ ದೇವಸ್ಥಾನದಲ್ಲಿ ನಡೆಯುವ ಪೂಜೆ ಪುನಸ್ಕಾರ ಗಳಿಗೆಂದು 2 ಗಂಡುಗ ಗದ್ದಗೆ 24 ಗದ್ಯಾಣವನ್ನು ಕಾಣಿಕೆಯಾಗಿ ಸಲ್ಲಿಸಬೇಕೆಂದು ನಮ್ಮಾಳುವರಿಗೆ ಕೊಟ್ಟರು ಎಂಬುದನ್ನು ನೋಡಿದರೆ ಬಹುಶಃ ಈ ಹಣವನ್ನು ದೇವಸ್ಥಾನದಲ್ಲಿನ ನಮ್ಮೂಳವರರ

ಗುಡಿಯಲ್ಲಿನ ಪೂಜೆಗೆ ಮಾತ್ರ ವಿನಿಯೋಗವಾಗುವ ಹಾಗೆ ವಿಧಿಸಲಾಯಿತ್ತೆಂದು ತೋರುತ್ತದೆ.[2] ಮತ್ತೊಂದು ಶಾಸನದ ಪ್ರಕಾರ ಇಮ್ಮಡಿ ಹರಿಹರನ ಆಳ್ವಿಕೆಯ ಕಾಲದಲ್ಲಿ ಪುರ ಮತ್ತು ಮಾರನಹಳ್ಳಿ ಗ್ರಾಮಗಳ ಮಗ್ಗದೆರೆ, ಮದುವೆದೆರೆ, ಪೊಳವಾರು, ಆಲೆದೆರೆ ಮುಂತಾದ ಸುಂಕ ಗಳಿಂದ ಬರುವ ಆದಾಯವನ್ನು ಪುರ ಗ್ರಾಮದ ವೀರಭದ್ರದೇವರ ಅಂಗಭೋಗಕ್ಕೆ ಲಖಣ್ಣನು ನೀಡಿದನೆಂದು ತಿಳಿಸುತ್ತದೆ.[3]

ಇಮ್ಮಡಿ ದೇವರಾಯನು ರತ್ನಧೇನು ಮಹಾದಾನವನ್ನು ಮಾಡುವ ಸಂದರ್ಭದಲ್ಲಿ ತೋರಿನಾಡವೇಂಠೆಯದ ಮೇನಾಪುರ ಮಾಗಣಿಯೊಳಗಣ ಚಂದಿಗಾಲ ಗ್ರಾಮವನ್ನು ವೃತ್ತಿಗಳಾಗಿ ವಿಭಜಿಸಿ ಹಲವಾರು ಬ್ರಾಹ್ಮಣರಿಗೆ ದಾನ ಮಾಡಿದುದನ್ನು ಇಲ್ಲಿನ ತಾಮ್ರಶಾಸನ ತಿಳಿಸುತ್ತದೆ. ಈ ಶಾಸನವು ಸಂಸ್ಕೃತ ಮತ್ತು ನಾಗಲಿಪಿಯಲ್ಲಿದೆ. ಇದನ್ನು ಬರೆದಾತ ವರದಪಾಚಾರ್ಯ. ದಾನಗ್ರಾಮದ ಮೇರೆಗಳನ್ನು ಮಾತ್ರ ಕನ್ನಡ ಭಾಷೆಯಲ್ಲಿ ಹೇಳಿದ. ಚೆಂದಿಗಾಲ ಗ್ರಾಮವನ್ನು ಆ ಸಂದರ್ಭದಲ್ಲಿ 'ಪ್ರತಾಪದೇವರಾಯಪುರ'ವೆಂದು ಹೆಸರಿಸಲಾಗಿದೆ.[4] ಶ್ರೀರಂಗಪಟ್ಟಣದ ಶಾಸನದ ಪ್ರಕಾರ ಅರಸನ ನಿರೂಪದಿಂದ ದೇವರಾಜ ಒಡೆಯರು ಶ್ರೀರಂಗಪುರದ ಶ್ರೀ ವೈಷ್ಣವರು ಕೊಡುತ್ತಿದ್ದ ಅಡಿಕೆ ಸುಂಕ, ಮಗ್ಗ, ವುಮಾರ ಕಾಣಿಕೆ ಮುಂತಾದ ತೆರಿಗೆಗಳಿಂದ ಬರುತ್ತಿದ್ದ ಆದಾಯವನ್ನು ಸೌಮ್ಯರಾಜನೆನಿಸಿದ ಶ್ರೀರಂಗನಾಥ ದೇವರಿಗೆ ವಸಂತೋತ್ಸವ ಪೂಜೆಗಾಗಿ ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[5] ಇಲ್ಲಿ ಬರುವ ತೆರಿಗೆಗಳಲ್ಲಿ ವುಮಾರ ಕಾಣಿಕೆ ಎಂಬ ಪದ ಗಮನಾರ್ಹ. ವುಮಾರ ಎಂಬ ಪದ ಕನ್ನಡದಲ್ಲಿಲ್ಲ. ಆದರೆ ಮೈಸೂರಿನಲ್ಲಿ ಪ್ರಚಲಿತವಾಗಿರುವ ತಮಿಳು ಆಡು ಮಾತಿನಲ್ಲಿ ವುಮಾರ ಎಂಬ ಪದವನ್ನು ಹೊಸತಿಲು ಎಂಬ ಅರ್ಥದಲ್ಲಿ ಬಳಸಲಾಗುತ್ತಿದೆ. ಪ್ರಾಕೃತದಲ್ಲಿ 'ಉಮ್ಮಾರ', ಪಾಳಿಯಲಿ 'ಉಮ್ಮಾರ' ಎಂಬ ಪದ ಪ್ರಯೋಗವಿದ್ದು ಇದರ ಅರ್ಥ ಹೊಸತಿಲು ಎಂದಾಗುತ್ತದೆ. ಸಂಸ್ಕೃತದಲ್ಲಿ 'ಉಮ್ಮಾರ' ಎಂಬ ಪದಕ್ಕೆ ಬಾಗಿಲು ವಾಡದ ಮೇಲಿನ ಮರಕಟ್ಟು ಎಂಬ ಅರ್ಥವಿದೆ. 'ವೂಮಾರ' ಎಂಬುದು ಈ ಉಮ್ಮಾರದಿಂದ ಬಂದಿರಬಹುದು. ಆದ್ದರಿಂದ ವೂಮಾರ ಕಾಣಿಕೆ ಎಂಬುದು ಪ್ರಾಕೃತದಿಂದ ಪ್ರಭಾವಿತವಾದ ಪದ ಇದು ಹೊಸತಿಲು ಹಣ ಎಂಬುದಕ್ಕೆ ಸಮನದ ಪದವೆನ್ನಬಹುದು. ಇದೇ ಶಾಸನದಲ್ಲಿನ 'ತಿರುನಾಳು' ಎಂಬ ತಮಿಳು ಪದದ ಪ್ರಯೋಗವನ್ನು ಈ ಸಂದರ್ಭದಲ್ಲಿ ಗಮನಿಸಬಹುದು.

ಪಾಂಡವಪುರ ಶಾಸನದ ಪ್ರಕಾರ ದೇವರಾಜ ಒಡೆಯನೇ ದಾನಿಯಾಗಿ ಕಾಣಿಸಿಕೊಂಡಿದ್ದಾನೆ. ಮೇಲುಕೋಟೆಯ ಸಂಪತ್ಕರ ನಾರಾಯಣ ದೇಪರಿಗೆ ವಸಂತೋತ್ಸವ ತಿರುನಾಳಿನ ಮಧ್ಯಾಹ್ನದ

ಅವಸರದ ಸಂಧಿಯಲ್ಲಿ ನಿವೇಧನೆ, ನಂದಾದೀವಿಗೆ, ವನಮಾಲೆಗಳಿಗಾಗಿ ಭೂಮಿ ದಾನ ಮಾಡಿದ ಪ್ರಸ್ತಾಪ ಬರುತ್ತದೆ.[6] ಶಾಸನ ಕಲ್ಲಿನ ಕೆಳಭಾಗ ಒಡೆದಿದ್ದು ವಿವರಗಳು ಸರಿಯಾಗಿ ದೊರೆಯುವುದಿಲ್ಲ.

ಪಾಂಡವಪುರ ಹೊಸಹಳ್ಳಿ ಶಾಸನ ಮಹಾರಾಜಾಧಿರಾಜ, ರಾಜಪರಮೇಶ್ವರ, ಅರಿರಾಯವಿಭಾಡ ಇತ್ಯಾದಿ ಬಿರುದಾಂಕಿತನಾದ ವಿಜಯರಾಯ ಮಹಾರಾಯನ ಆಳ್ವಿಕೆಯ ಕಾಲಕ್ಕೆ ಸೇರಿದ್ದಾಗಿದೆ. ಈ ಶಾಸನದ ವಿವರದ ಪ್ರಕಾರ ಇಮ್ಮಡಿ ದೇವರಾಯನಿಗೆ ವಿಜಯರಾಯನೆಂಬ ಒಬ್ಬ ತಮ್ಮನಿದ್ದು, ಆತನಿಗೆ ಪ್ರತಾಪದೇವರಾಯ ಅಥವಾ ವಿಜಯರಾಯ ಎಂಬ ಹೆಸರಿತ್ತೆಂದು ಹೇಳಲಾಗಿದೆ. ಈ ವಿಜಯರಾಯನು ಮಲ್ಲಿಕಾರ್ಜುನನ ಅಗ್ರಜನಾಗಿದ್ದಿರಬಹುದೆಂದೂ ಊಹಿಸ ಲಾಗಿದೆ. ಮಲ್ಲಿಕಾರ್ಜುನನ ನಂತರ ಆಳತೊಡಗಿದ ವಿರೂಪಾಕ್ಷನು ಈತನ ಮಗ. ಆದ ಕಾರಣ ಶಾಸನೋಕ್ತ ವಿಜಯರಾಯನು ದೇವರಾಯನ ತಮ್ಮನೋ, ಹಿರಿಯನೋ ಆಗಿರಬಹುದು. ಇಮ್ಮಡಿ ದೇವರಾಯನ ತಂದೆಗೂ ವಿಜಯರಾಯನೆಂಬ ಹೆಸರಿದ್ದಿತು. ಆತನು ವಿಜಯ ಭೂಪತಿ ಎಂದು ಬುಕ್ಕನೆಂದು ಹೆಸರಿಟ್ಟಿದ್ದಾನೆ. ತಂದೆಯ ಹೆಸರನ್ನು ಮಗನಿಗಿಟ್ಟಿರಬಹುದೆಂದು ಊಹಿಸುವುದಾದಲ್ಲಿ ಈ ವಿಜಯರಾಯನು ಇಮ್ಮಡಿ ದೇವರಾಯನ ಮಗನಾಗಿರಬಹುದು.[7]

ಇಮ್ಮಡಿ ದೇವರಾಯ (ಮಲ್ಲಿಕಾರ್ಜುನ)ನ ಕಾಲಕ್ಕೆ ಸೇರಿದ ಶಾಸನವು ದೇವರೊಭಟ್ಟನೆಂಬ ಬ್ರಾಹ್ಮಣನಿಗೆ ಮಾಡಿದ ಗ್ರಾಮದಾನವನ್ನು ತಿಳಿಸುವ 3 ತಾಮ್ರದ ಹಲಗೆಗಳ ಮೇಲೆ ನಾಗರ ಲಿಪಿಯಲ್ಲಿ ಕೆತ್ತಲಾದ ಸಂಸ್ಕೃತದಲ್ಲಿ ಬರೆಯಲಾಗಿದೆ. ಇದರಲ್ಲಿ ಅರಸನ ವಂಶಾವಳಿಯನ್ನು ಕೊಡುವಾಗ ದೇವರಾಯ(1) ನ ಮಗನನ್ನು ವಿಜಯರಾಯನೆಂದು ಕರೆದು, ಆತನ ಮಗ ದೇವರಾಯನೆಂದು ದೇವರಾಯನ ಮಗ ಮಲ್ಲಿಕಾರ್ಜುನನೆಂದೂ ಹೇಳಿ ಇವನನ್ನು ಶೌರ್ಯಾದಿಗಳಲ್ಲಿ ತಂದೆಗಿಂತ ಅಧಿಕನೆಂದು ಇಮ್ಮಡಿ ದೇವರಾಯನೆಂದು ಹೊಗಳುತ್ತಾರೆ ಎಂದು ತಿಳಿಸುತ್ತದೆ.[8] ಈ ದೃಷ್ಟಿಯಿಂದ ವಾಸ್ತವವಾಗಿ ಈತ ಮುಮ್ಮಡಿ ದೇವರಾಯನಾಗಿರಬೇಕು.

ಪಾಂಡವಪುರ ಮತ್ತು ಶ್ರೀರಂಗಪಟ್ಟಣ ಎರಡೂ ಶಾಸನಗಳ ಪ್ರಕಾರ ಇಮ್ಮಡಿ ಪ್ರೌಢ ದೇವರಾಯನಾದ ಮಲ್ಲಿಕಾರ್ಜುನನ ಆಳ್ವಿಕೆಯ ಕಾಲದಲ್ಲಿ ತಿಮ್ಮಣ್ಣ ದಣ್ಣಾಯಕನ ಪತ್ನಿ ರಂಗಾಂಬಿಕೆ 'ರಂಗಮಠ'ವನ್ನು ಕಟ್ಟಿಸಿ ಅದರಲ್ಲಿ ದಿನಂಪ್ರತಿ 24 ಶ್ರೀ ವೈಷ್ಣವರಿಗೆ ಅನ್ನದಾನ ಮಾಡ ಬಯಸಿದಳು. ಆಗ ಆಕೆಯ ಪತಿ ಅರಸನನ್ನು ಪ್ರಾರ್ಥಿಸಿ ಕೊಂಡದರ ಫಲವಾಗಿ ಅರಸನು ತಿಮ್ಮಣ್ಣ

ದಣ್ಣಾಯಕನಿಗೆ ಕುರುವೆಂಕನಾಡವಂಶಿಯದ ಮೇಲುಕೋಟೆ ಗ್ರಾಮಕ್ಕೆ ಸೇರಿದ ಬಾಲೇನಹಳ್ಳಿ ಮತ್ತು ಯಲವದ ಹಳ್ಳಿಗಳನ್ನು ದಾನ ಮಾಡಿದನೆಂದು ಪಾಂಡವಪುರ ಮೇಲುಕೋಟೆಯ ಶಾಸನ ತಿಳಿಸುತ್ತದೆ.[9] ಶ್ರೀರಂಗಪಟ್ಟಣದ ಶಾಸನದ ಪ್ರಕಾರ ವರದಪಾಚಾರ್ಯನ ಮಗ ಶ್ರೀ ಗಿರಿಯು ಶಾಸನವನ್ನು ಬರೆದುದಾಗಿ ಹೇಳಿದೆ. ವಾಸ್ತವಿಕವಾಗಿ ಇದು ಸಹ ಶಿಲಾಶಾಸನವೇ ಬಹುಶಃ ತಿಮ್ಮಣ್ಣ ದಣ್ಣಾಯಕನಿಗಿತ್ತ ತಾಮ್ರ ಶಾಸನದ ಪ್ರತಿ ಇದು. ಈ ದಾನದ ಪ್ರಸ್ತಾಪವನ್ನು ಪಾಂಡವಪುರ 179 ರ ಶಾಸನದಲ್ಲಿ ಮಾಡಲಾಗಿದೆ. ಆ ಮೊದಲೇ ಮೇಲುಕೋಟೆಯ ಚೆಲವಿಳೆರಾಯ ದೇವರಿಗೆ ದಾನವಾಗಿ ನೀಡಲಾದ ಭೂಮಿಯನ್ನು ಹೊರತುಪಡಿಸಿ ಎರಡೂ ಗ್ರಾಮಗಳ ಇತರ ಭೂಮಿಗಳನ್ನು ದಾನ ಮಾಡಿದುದಾಗಿಯೂ ಇವುಗಳಿಂದ ಬಂದ 80 ವರಹಗಳ ಆದಾಯ ಸಾಲದೆ ಹೊರ ಕಾರಣ 40 ವರಹಗಳ ಉತ್ಪನ್ನವಿರುವ ಮತ್ತಷ್ಟು ಭೂಮಿಯನ್ನು ದಣ್ಣಾಯಕನು 400 ವರಹಗಳಿಗೆ ಕೊಂಡು ಈ ಎಲ್ಲಾ ಭೂಮಿಯನ್ನು ಮೇಲು ಕೋಟೆಯ ದೇವಸ್ಥಾನದ ಸೇನಭೋವ ರಾಮಾನುಜಜೀಯರ ವಶಕ್ಕೆ ನೀಡಿ, ಆ ಮಠದಲ್ಲಿ ಅನ್ನದಾನವನ್ನು ಮಾಡುವ ಜವಾಬ್ದಾರಿಯನ್ನು ಆತನಿಗೆ ಹೊರಿಸಲಾಯಿತ್ತೆಂದೂ ಶಾಸನದಲ್ಲಿ ಹೇಳಿದೆ. ಈ ತಿಮ್ಮಣ್ಣ ದಣ್ಣಾಯಕನು ನಾಗಮಂಗಲದ ಪ್ರಭುವಾದ ಲೋಹಿತ ವಂಶದ ಸಿಂಗಣ್ಣನ ಮಗ.[10]

ಪಾಂಡವಪುರದ 2 ಶಾಸನಗಳು ವಿರೂಪಾಕ್ಷನ ಆಳ್ವಿಕೆಗೆ ಸೇರಿದಾಗಿವೆ. ಮೊದಲನೆಯ ಒಂದು ಶಾಸನ ಸೀತಾಪುರಕ್ಕೆ ಸೇರಿದ್ದಾಗಿದೆ. ಇದರ ಕಾಲ 1467ರ ಆಗಸ್ಟ್ 22. ಇದರಲ್ಲಿ ಇದಕ್ಕೂ ಮೊದಲು ಕ್ರಿ.ಶ. 1455 ಆಗಸ್ಟ್ 14 ರಂದು ಮಾಡಲಾದ ದಾನದ ಪ್ರಸ್ತಾಪವಿದೆ. ಶಾಸನದಲ್ಲಿ ಸ್ವಾರಸ್ಯಕರವಾದ ವ್ಯವಹಾರವೊಂದನ್ನು ಹೇಳಲಾಗಿದೆ. ನಾಗಮಂಗಲದ ಸಿಂಗಣ್ಣ ಒಡೆಯರ ಮಗ ದೇವರಾಜನು ಕಾವೇರಿ ನದಿಗೆ ಒಂದು ಕಾಲುವೆಯನ್ನು ತೋಡಿಸಿದಾಗ ಹರವು ಗ್ರಾಮದ ಮಹಾಜನರು ತಮ್ಮ ಗ್ರಾಮದವರೆಗೂ ಈ ಕಾಲುವೆಯನ್ನು ತೋಡಿಸಿ ಕೊಡಬೇಕೆಂದು ಬಯಸಿದರು. ಆತ ಇದಕ್ಕೆ ಒಪ್ಪಿ ಕಾಲುವೆಯನ್ನು ತನ್ನ ವೆಚ್ಚದಲ್ಲಿಯೇ ತೋಡಿಸಿಕೊಟ್ಟನೆಂಬುದು ಸ್ಪಷ್ಟ ಎಂತಲೇ ಈ ಕಾರ್ಯಕ್ಕೆ ಪ್ರತಿಯಾಗಿ ಕುರುವಂಕನಾಡ ವೇಂಟೆಯುದ ಹೊಸಹಳ್ಳಿ ಗ್ರಾಮವನ್ನು ಆ ಗ್ರಾಮದ ಹೆಬಾರುವ ಯದವಣ್ಣನು ಯಜಮಾನ ಭಾಗವೆಂದು ಶ್ರೋತ್ರಿಯವಾಗಿ ಕೊಟ್ಟನು. ಬಹುಶಃ ಇದು ನಡೆದದ್ದು ಕ್ರಿ.ಶ. 1455ರಲ್ಲಿ ಶಾಸನದಲ್ಲಿ ಇದು ಅಷ್ಟು ಸ್ಪಷ್ಟವಾಗಿಲ್ಲ. ಕೆಲಕಾಲದ ನಂತರ ಕ್ರಿ.ಶ. 1467ರಲ್ಲಿ ಅದೇ ಯವಣ್ಣನು ಚಿಕ್ಕಮಳಲಿ, ಹೊಸಹಳ್ಳಿ ಮತ್ತು ಕಂದನಹಾಳ್ ಗ್ರಾಮದ ಅರ್ಧ ಭಾಗವನ್ನು 400 ಹೊನ್ನುಗಳಿಗೆ ಇದೇ ದೇವರಾಜನಿಗೆ ಮಾರಿದನು. ಹೀಗೆ ಕ್ರಯವಾಗಿ ಪಡೆದ

ಹೊಸಹಳ್ಳಿ ಗ್ರಾಮವನ್ನು ದೇವರಾಜನು 208 ವೃತ್ತಿಗಳಾಗಿ ವಿಭಜಿಸಿ, ಆ ವೃತ್ತಿಗಳಲ್ಲಿ 8 ವೃತ್ತಿಗಳನ್ನು ಗ್ರಾಮದ ಶ್ರೀ ರಾಮಚಂದ್ರ ದೇವರಿಗೂ ಉಳಿದ 200 ವೃತ್ತಿಗಳನ್ನು ನಾನಾ ಗೋತ್ರ ಸೂತ್ರಗಳ ಬ್ರಾಹ್ಮಣರಿಗೂ ತನ್ನ ತಾಯಿ ಸೀತಾಯಮ್ಮನ ಪುಣ್ಯಾರ್ಥವಾಗಿ ದಾನ ಮಾಡಿದನೆಂದೂ ಶಾಸನ ತಿಳಿಸುತ್ತದೆ. ಹೊಸಹಳ್ಳಿ ಗ್ರಾಮವನ್ನು ಯಜಮಾನ ಭಾಗವಾಗಿ ಪಡೆದರೂ ಬಹುಶಃ ಆ ಗ್ರಾಮದ ಮೇಲಿನ ಕ್ರಯ, ಭೋಗ್ಯ ಮುಂತಾದ ಹಕ್ಕುಗಳೆಲ್ಲಾ ಹರಹು ಗ್ರಾಮದ ಮಹಾಜನರಿಗೆ ಸೇರಿತ್ತೆಂದೂ ಅನುಭವಿಸುವ ಹಕ್ಕು ಮಾತ್ರ ದೇವರಾಜನದಾಗಿತ್ತೆಂದೂ, ಆ ಗ್ರಾಮವನ್ನು ಕ್ರಯವಾಗಿ ಪಡೆದ ನಂತರವೇ ಅದರ ಒಡೆತನ ಆತನಿಗೆ ಲಭಿಸಿತ್ತೆಂದೂ ಇದರಿಂದ ಸ್ಪಷ್ಟವಾಗುತ್ತದೆ.[11]

ಪಾಂಡವಪುರದ ಮತ್ತೊಂದು ಶಾಸನ ದಾನ ಶಾಸನವಾಗಿದೆ. ಈ ಶಾಸನದ ಪ್ರಕಾರ ಅರಸನಾದ ವಿರೂಪಾಕ್ಷನು ಸಣಬಿಮುಕುಳಿಯನಾಡನ್ನು ತಿರುನಾರಾಯಣಪುರ (ಮೇಲುಕೋಟೆ) ನಾಚಿಯಾರಮ್ಮನಿಗೆ ದಾನವಾಗಿ ನೀಡಿದ್ದನು. ಈಕೆ ಆ ಊರಿನ ನಾರಾಯಣ ದೇವರ ಲಕ್ಷ್ಮೀದೇವಿಯ ಹಾಗೂ ಶಠಗೋಪಮುನಿಯ ಕೈಂಕರ್ಯದುರಂಧರೆ. ಈಕೆಯು ಮಹಾಪ್ರಧಾನ ತಿಮ್ಮಣ್ಣ ದಣ್ಣಾಯಕನ ಹಾಗೂ ದೇವಾಲಯದ ಐವತ್ತಿಬ್ಬರ ಅಪೇಕ್ಷೆಯಂತೆ ಆ ನಾಡಿಗೆ ಸೇರಿದ ಕುಳಿಯಕೆರೆ ಗ್ರಾಮದ ಕಾಲುವಳಿಯಾದ ನಳನಹಳ್ಳಿಯಲ್ಲಿನ ಗೃಹ ಹಾಗೂ ನಿವೇಶನಗಳನ್ನು ಪರಾಂಕುಶ ಸಮುದ್ರವೆಂಬ ಕೆರೆಯ ಕೆಳಗಣ ಭೂಮಿಗಳನ್ನು ಕುರುಕುಳವಂಪಾಡಿ ಗ್ರಾಮದ ಗೃಹ ಮತ್ತು ನಿವೇಶನಗಳನ್ನು ಆಳ್ವಾರ ದೇವರ ಕೈಂಕರ್ಯ ಮಾಡಿಕೊಂಡಿದ್ದ ಶ್ರೀ ವೈಷ್ಣವರಿಗೆ ದಾನವಾಗಿ ನೀಡಿದಳು. ಹೀಗೆ ದಾನವಾಗಿ ಸ್ವೀಕರಿಸಿದುದನ್ನು ಪ್ರತಿ ಗ್ರಹಿಗಳು ಹನ್ನೆರಡು ವರ್ಷಗಳೊಳಗೆ ವಿಕ್ರಯ ಮಾಡಬಾರದೆಂದು ಕರಾರನ್ನು ವಿಧಿಸಲಾಯಿತು.[12]

ಸಂತೇ ಬಾಚಹನಹಳ್ಳಿಯ ಶಾಸನದ ಪ್ರಕಾರ ಗೋಪಾಲದೇವನು ಬಾಚಹಳ್ಳಿ ಸೀಮೆಯ ಬಿಕಸಮುದ್ರ ಗ್ರಾಮವನ್ನು ಬಾಚಹಳ್ಳಿಯ ವೀರನಾರಾಯಣ ದೇವರಿಗೆ ನರಸಣ್ಣ ನಾಯಕನು ಅಸ್ತಮಾನವಾದಾಗ ಅವನಿಗೆ ಧರ್ಮವಾಗಲೆಂದು ದಾನ ಮಾಡಿದುದಾಗಿ ತಿಳಿಸುತ್ತದೆ.[13] ಶಾಸನೋಕ್ತ ನರಸಣ್ಣ ನಾಯಕನು ತುಳುವ ನರಸನಾಯಕನಾಗಿದ್ದಿರಬಹುದು. ಶಾಸನ ಕಾಲದ ವೇಳೆಗಾಗಲೇ ಈತ ಮರಣ ಹೊಂದಿದ್ದನೆಂದು ಇದರಿಂದ ತಿಳಿಯುತ್ತದೆ.

ಕೃಷ್ಣರಾಜಪೇಟೆಯಲ್ಲಿ ದೊರೆತಿರುವ ತಾಮ್ರಶಾಸನ, ನಾಗರಲಿಪಿ ಮತ್ತು ಸಂಸ್ಕೃತ ಭಾಷೆಯಲ್ಲಿರುವ 3 ಹಲಗೆಗಳ ಈ ಶಾಸನದಲ್ಲಿ ತುಳುವ ನರಸನಾಯಕನ ಮಗ ವೀರನರಸಿಂಹನು ಆಳುತ್ತಿದ್ದಾಗ ಸಪ್ತಸಾಗರ ಮಹಾದಾನದ ಸಂದರ್ಭದಲ್ಲಿ ಅರಸನು ಅತ್ರಿಗೋತ್ರದ ನಂಜೆಹೆಬಾರುವನಿಗೆ ಸಿಂಧುಘಟ್ಟದ ಸೀಮೆಯ ಕೈಗೊಂಡ ಹಳ್ಳಿಗೆ ಪ್ರತಿನಾಮವಾದ ವೀರನರಸಿಂಹ ಪುರವನ್ನು ದಾನ ಮಾಡಿದುದಾಗಿ ತಿಳಿದು ಬರುತ್ತದೆ.[14] ಶಾಸನದ ಕಾಲ ಶಕವರ್ಷ 1383ನೆಯ ಚಿತ್ರಭಾನು ಸಂವತ್ಸರದ ಮಾಘಬಹುಳ 14 ಭಾನುವಾರ ಶ್ರವಣ ನಕ್ಷತ್ರ ಆದರೆ ಈ ವಿವರಗಳು ಸರಿ ಹೊಂದುವುದಿಲ್ಲ. ಕ್ರಿ.ಶ. 1462ನೆಯ ಜನವರಿ 29 ಅಥವಾ ಕ್ರಿ.ಶ. 1463ನೇಯ ಫೆಬ್ರವರಿ 17ಕ್ಕೆ ಮೇಲಿನ ವಿವರಗಳನ್ನು ಸರಿಹೊಂದಿಸಬಹುದಾದರೂ ಈ ವರ್ಷದಲ್ಲಿ ತುಳುವ ವೀರ ನರಸಿಂಹನು ಆಳುತ್ತಲೇ ಇರಲಿಲ್ಲ ಎಂಬುದು ಗಮನಾರ್ಹ. ಆತನು ಸುಮಾರು ಕ್ರಿ.ಶ. 1505 ರಿಂದ 1509 ರವರೆಗೆ ಆಳಿದನು. ಆದ್ದರಿಂದ ಶಾಸನ ಆತನ ಆಳ್ವಿಕೆಯ ಸುಮಾರು 42–43 ವರ್ಷಗಳಿಗೂ ಹಿಂದೆಯೇ ಹುಟ್ಟಿದೆ ಎಂದಾಗುತ್ತದೆ. ದಾನ ನೀಡಿದ ಉಲ್ಲೇಖ ಬರಲು ಮೊದಲು ಒಮ್ಮೆಲೇ ಸ್ಕಂದನ ಭ್ರಾತೃವಾದ ಗಜಾನನ ಶ್ಲೋಕ (ಸಾಲುಗಳು 44–46) ಕಾಣಿಸಿಕೊಂಡಿರುವುದು ಇದರಲ್ಲಿನ ವೈಶಿಷ್ಟ್ಯ. ಇದನ್ನು ಹೊರತುಪಡಿಸಿದರೆ ಶಾಸನ ಕೂಟವಾದುದೆನ್ನಲು ಬೇರಾವ ಆಧಾರಗಳೂ ಇಲ್ಲ. ಬಹುಶಃ ಶಾಸನದಲ್ಲಿ ಕಾಲವನ್ನು ತಪ್ಪಾಗಿ ಉಲ್ಲೇಖಿಸಲಾಗಿದೆ ಎಂದಷ್ಟೇ ನಾವು ಈಗ ಊಹಿಸಬಹುದು.

ಮೇಲುಕೋಟೆಯಲ್ಲಿ ದೊರೆತಿರುವ ಮೂರು ಶಾಸನಗಳು ಕೃಷ್ಣದೇವರಾಯನ ಆಳ್ವಿಕೆಗೆ ಸೇರಿದಾಗಿದೆ. ಒಂದು ಶಾಸನದ ಪ್ರಕಾರ, ದಂಡು ಆ ಉಭಳದೇವರ ಮಗನಾದ ಕೃಷ್ಣದೇವರಾಯ ನಾಯಕನು ಅರಸನು ನಾಯಕತನಕ್ಕೆ ಪಾಲಿಸಿದ್ದ ಶ್ರೀರಂಗಪಟ್ಟಣ–ಸಿಂದಗಟ್ಟ ಸೀಮೆಯೊಳಗೆ ಎರಡೂ ಗ್ರಾಮಗಳನ್ನು ಸಂತೆಯ ಆಯ, ತಾಳವಾರಿಕೆ, ಹೂಗದೆರೆ ಮುಂತಾದವುಗಳಿಂದ ಬರುವ ಆದಾಯ ಭಾಗವನ್ನು ಒಟ್ಟು 254 ವರಹಗಳನ್ನು ದೇವರಿಗೆ ದಾನ ಮಾಡಿದುದಾಗಿ ಶಾಸನದಿಂದ ತಿಳಿದುಬರುತ್ತದೆ. ಈ ಸಂದರ್ಭದಲ್ಲಿ "ಹಿಂದಕ್ಕೆ ದೇವಸ್ಥಾನದ ಸೀಮೆಯವರನೂ ವೊಕ್ಕುಳಾಗಿ ಹಿಡಿದುಕೊಂಡು ಹೋಗಿ ತೊಂಡನೂರ ಗದ್ದೆಯನೂ ಉಳಿಸುವ ಸಂಬಂಧ ಅದನ್ನು ನಾವು ಕುಳುವ ಕಡಿದುಬಿಟ್ಟೆವು"[15] ಎಂದು ಹೇಳಿದೆ. ಮೇಲುಕೋಟೆಯ ದೇವಸ್ಥಾನದ ಭೂಮಿಗಳನ್ನು ಉಳುತ್ತಿದ್ದ ಒಕ್ಕಲಿಗರನ್ನು ತೊಂಡನೂರಿನಲ್ಲಿ ದೇವಸ್ಥಾನಕ್ಕೆ ಸೇರದೆ ಇರುವ ಭೂಮಿಗಳನ್ನು ಉಳಲು ಬಲವಂತವಾಗಿ (?) ಕರೆದೊಯ್ಯುತ್ತಿದ್ದ ಕಾರಣ ಈಗ ತೊಂಡನೂರಿನ ಆ ಭೂಮಿಗಳನ್ನು

ದೇವಸ್ಥಾನಕ್ಕೆ ನೀಡಿದುದಾಗಿ ಇದನ್ನು ಅರ್ಥೈಸಬಹುದು. ಇದರಿಂದ ಈ ಎಲ್ಲಾ ಭೂಮಿಗಳ ಒಡೆತನ ದೇವಸ್ಥಾನಕ್ಕೆ ಸೇರಿದ್ದು ಅವುಗಳನ್ನು ಉಳಲು ಒಕ್ಕಲಿಗರನ್ನು ಸೂಕ್ತವಾಗಿ ನಿಯಮಿಸಿ ಕೊಳ್ಳುವ ಹೊಣೆ ಸಹ ದೇವಸ್ಥಾನದ್ದೇ. ಆದುದರಿಂದ ಒಕ್ಕಲುಗಳನ್ನು ಬಲವಂತದಿಂದ ಬೇರೆಡೆಗೆ ಕರೆದೊಯ್ಯುವ ಅಭ್ಯಾಸಕ್ಕೆ ಮುಕ್ತಾಯ ಹಾಕಿದಂತಾಯಿತೇನೋ.

ಕೃಷ್ಣರಾಜಪೇಟೆಯ ಮತ್ತೊಂದು ಶಾಸನ ಸಂಸ್ಕೃತ ಭಾಷೆ, ನಾಗರ ಲಿಪಿಯಲ್ಲಿದೆ. ಈ ಶಾಸನದ ಪ್ರಕಾರ ಸಿಂಧಘಟ್ಟದ ಸೀಮೆಗೆ ಸೇರಿದ ವೀರನರಸಿಂಹೇಂದ್ರ ಪುರವಾದ ಬೆಲೆಕೆರೆ ಗ್ರಾಮವನ್ನು ಶ್ರೀರಂಗಪಟ್ಟಣದ ನಿವಾಸಿಯಾದ ಸುಬ್ರಹ್ಮಣ್ಯನ ಮಗ ಶ್ರೀನಿವಾಸನಿಗೆ ಅರಸನು ದಾನ ಮಾಡಿದುದನ್ನು ಇದು ಪ್ರಸ್ತಾಪಿಸುತ್ತದೆ. ಇದೊಂದು ಪುನರ್ದತ್ತಿ. ಈ ಗ್ರಾಮವನ್ನು ಹಿಂದೆ ವೀರ ನರಸಿಂಹನಾಯಕನು ಸಪ್ತಸಾಗರ ದಾನ ಮಾಡುವ ಸಂದರ್ಭದಲ್ಲಿ ಶ್ರೀಶೈಲದ ಶಿವನ ಸನ್ನಿಧಿಯಲ್ಲಿ ಸುಬ್ರಹ್ಮಣ್ಯನಿಗೆ ದಾನವಾಗುತ್ತಿದ್ದನ್ನು ಇದರಲ್ಲಿ ಸ್ಮರಿಸಲಾಗಿದೆ.[16] ಈ ಸಂದರ್ಭದಲ್ಲಿ ಒಂದು ಅಂಶವನ್ನು ಗಮನಿಸಬಹುದು. ಕೃಷ್ಣರಾಜಪೇಟೆಯ ಕೈಗೋನಹಳ್ಳಿ ತಾಮ್ರ ಶಾಸನದಲ್ಲಿ ವೀರ ನರಸಿಂಹನು ಆ ಗ್ರಾಮ (ವೀರನರಸಿಂಹ ಪುರವೆನಿಸಿದ ಕೈಗೊಂಡ ಪಲ್ಲಿ) ವನ್ನು ಶ್ರೀ ಶೈಲದ ಶಿವ ಸನ್ನಿಧಿಯಲ್ಲಿ ಸಪ್ತಸಾಗರ ದಾನದ ಸಂದರ್ಭದಲ್ಲಿ ನಂಜೇಹೆಬಾರುವನಿಗೆ ದಾನ ಮಾಡಿದುದರ ಪ್ರಸ್ತಾಪವಿದೆ.[17] ಆದರೆ ಈ ಶಾಸನದಲ್ಲಿ ಕೊಟ್ಟಿರುವ ತೇದಿಯ ವಿವರಗಳು ಸರಿಹೊಂದುವುದಿಲ್ಲ ವೆಂದು ಈಗಾಗಲೇ ಗಮನಿಸಿದ್ದೇವೆ. ಪ್ರಸ್ತುತ ಶಾಸನದಲ್ಲಿ ಹಿಂದೆ ವೀರನರಸಿಂಹರಾಜನು ಮಾಡಿದ ಶಾಸನದ ಪ್ರಸ್ತಾಪವಿರುವುದಲ್ಲದೆ ಆ ದಾನವನ್ನು ಉಭವ ಸಂವತ್ಸರದ ವೈಶಾಖ ಶುದ್ಧ ದ್ವಾದಶಿ ದಿನದಂದು ಮಾಡಲಾಯಿತು ಎಂದು ಸಹ ಹೇಳಿದೆ. ಬಹುಶಃ ಕೈಗೋನಹಳ್ಳಿ ತಾಮ್ರ ಶಾಸನದ ಕಾಲವು ಅದೇ ಆಗಿದ್ದು ದುರದೃಷ್ಟ ವಶಾತ್ ಆ ಶಾಸನದಲ್ಲಿ ತೇದಿಯ ವಿವರಗಳನ್ನು ತಪ್ಪಾಗಿ ನೀಡಿದೆ ಎನ್ನಬಹುದು. ಸಪ್ತಸಾಗರ ಮಹದಾನದ ಆ ಸಂದರ್ಭದಲ್ಲಿ ಸುಬ್ರಹ್ಮಣ್ಯನಿಗೆ ಬೆಲೆಕೆರೆ ಗ್ರಾಮವನ್ನು ನಂಜೇಹಬನುವನಿಗೆ ಕೈಗೊಂಡ ಪಲ್ಲಿಗ್ರಾಮವನ್ನು ವೀರನರಸಿಂಹನು ದಾನವಾಗಿ ನೀಡಿರಬೇಕು.

ಮೇಲುಕೋಟೆಯಲ್ಲಿ ದೊರೆತಿರುವ ಶಾಸನಗಳು ಅಚ್ಯುತ ದೇವರಾಯನ ಕಾಲಕ್ಕೆ ಸೇರಿದ್ದಾಗಿವೆ. ಹರಿಗಿಲ ಅಬ್ಬಿರಾಜನ ಮಗ ಪೆರಿರಾಜನು ಮೇಲುಕೋಟೆಯ ದೇವಸ್ಥಾನಕ್ಕೆ ಸೇರಿದ ಕದಳಗೆರೆ ಗ್ರಾಮದ ಹೊಸಕೆರೆ ಮತ್ತು ಕೃಷ್ಣದೇವ ಒಡೆಯರ ಕೆರೆಗಳು ಖಿಲವಾಗಿರಲಾಗಿ 150 ಗದ್ಯಾಣಗಳ ವೆಚ್ಚದಲ್ಲಿ ಅವುಗಳನ್ನು ಜೀರ್ಣೋದ್ಧಾರ ಮಾಡಿಸಿದನು. ಆದ್ದರಿಂದ ದೇವಸ್ಥಾನದ

ಐವತ್ತಿಬ್ಬರು ಅಯ್ಯಗಳು ಆತನ ಹೆಸರಿನಲ್ಲಿ ದೇವರಿಗೆ ನೈವೇದ್ಯಕ್ಕೆ ಏರ್ಪಾಟನ್ನು ಮಾಡಿ ನೈವೇದ್ಯದ ನಾಲ್ಕರಲ್ಲಿ ಒಂದು ಭಾಗವನ್ನು ಪೆರಿರಾಜ ಅಥವಾ ಆತನು ಕಟ್ಟುಮಾಡಿಕೊಟ್ಟ ಬೇರೆ ಯಾರಿಗಾದರೂ ನೀಡುವುದಾಗಿ ತಿಳಿಸಿ ಶಾಸನ ಹಾಕಿಸಿದರು. ಒಂದು ವೇಳೆ ಆ ಕೆರೆಗಳ ಅನುಭೋಗ ತಪ್ಪಿದರೂ ಈ ಮರ್ಯಾದೆ ತಪ್ಪುವುದಿಲ್ಲ ಎಂದು ಆಶ್ವಾಸನೆಯನ್ನು ಸಹ ನೀಡಿದನು.[18]

ಅದೇ ವರ್ಷದಲ್ಲಿ ಬಹುಶಃ ಹರಿಗಿಲ ಅಬ್ಬರಾಜನ ಇನ್ನೊಬ್ಬ ಮಗ ತಿರುಮಲರಾಜನು ಅಲ್ಲಿನ ಐವತ್ತಿಬ್ಬರಿಗೆ ಗ್ರಾಮವೊಂದನ್ನು ದಾನ ಮಾಡಿದನೆಂದು ಇನ್ನೊಂದು ಶಾಸನ ತಿಳಿಸುತ್ತದೆ.[19] ಆದರೆ ಇತರ ವಿವರಗಳು ಲಭ್ಯವಾಗಿಲ್ಲ. ಇದೇ ತಿರುಮಲರಾಜನು ನಾಗಮಂಗಲದೊಳಗಣ ಸೆಟಿಪುರ, ಮಾಲನಹಳ್ಳಿ ಹಾಗೂ ಅದಕ್ಕೆ ಸಲುವ ಕಾಲುವಳಿಗಳಾದ ನೆಲೆಮಂಗಲ, ಹೊಳವಳ್ಳಿ, ಕರನಾರನ ಹಳ್ಳಿಗಳನ್ನು ಮೇಲುಕೋಟೆಯ ಚೆಲಪಿಳೆರಾಯ ದೇವರಿಗೆ ಮರುವರ್ಷ (ಕ್ರಿ.ಶ. 1535) ದಾನ ಮಾಡಿದನು.[20] ಈ ಗ್ರಾಮಗಳು ನಾಗಮಂಗಲಕ್ಕೆ ಸೇರಿದವುಗಳಾಗಿದ್ದು ಪೂರ್ವದಲ್ಲಿ ಅರಸನು ಅದನ್ನು ರಾಮಾಭಟ್ಟಯ್ಯನವರಿಗೆ ಪಾಲಿಸಿದ್ದನೆಂದೂ ತಿರುಮಲರಾಜನು ಈಗ ಅದನ್ನು ರಾಮಭಟ್ಟರ ಕೈಯಿಂದ ಬಿಡಿಸಿಕೊಂಡು ತಾನು ತನ್ನ ಧರ್ಮವಾಗಿ ಬಿಟ್ಟುಕೊಟ್ಟನೆಂದೂ ಪ್ರಸ್ತುತ ಶಾಸನದಲ್ಲಿ ಹೇಳಲಾಗಿದೆ. ತಿರುಮಲರಾಜನನ್ನು ಸಿಂದುಗೋವಿಂದ, ಸಿತಕರಗಂಡ, ಮಣಿನಾಗ ಪುರವರಾಧೀಶ್ವರ ನೆಂದೆಲ್ಲಾ ವರ್ಣಿಸಿದೆ. ಈ ಬಿರುದನ್ನು ಬೇಲೂರಿನ ನಾಯಕರು ಧರಿಸಿದ್ದರು. ಆದರೆ ಈ ಪಾಳೆಯಗಾರ ಮನೆತನದ ಮೂಲಪುರುಷ ಕೃಷ್ಣಪ್ಪನಾಯಕ. ಅವರೆಲ್ಲಾ 'ನಾಯಕ' ಎಂಬ ಉಪನಾಮವನ್ನು ಧರಿಸಿದ್ದರು. ಅದನ್ನು ಗಮನಿಸಿದರೆ ಈ ತಿರುಮಲರಾಜ ಬಹುಶಃ ಆ ಮನೆತನಕ್ಕೆ ಸೇರಿರಲಾರ ಎನಿಸುತ್ತದೆ.

ಮಹಿಲನಹಳ್ಳಿಯ ಶಾಸನದ ಪ್ರಕಾರ, ಆ ಗ್ರಾಮವನ್ನು ಮೇಲುಕೋಟೆಯ ಚೆಲ್ವಪಿಳ್ಳೆರಾಯ ದೇವರಿಗೆ ಅಬ್ಬಗಂಜೂರಿನ ನಂಜರಾಜನು ದಾನ ಮಾಡಿದನೆಂದು ಹೇಳಿದೆ.[21] ಶಾಸನದ ಕಾಲ ಜಯ ಸಂವತ್ಸರದ ವೈಶಾಖ ಬಹುಳ 12. ಶಾಸನದಲ್ಲಿ ಆತನ ಹೆಸರಿಲ್ಲ. ಆದರೆ ರಾಮಭಟ್ಟನ ಪ್ರಸ್ತಾಪವಿದೆ. ದಾನವನ್ನು ಅರಸನ ಅಪ್ಪಣೆ ಪಡೆದು ಮಾಡಿದುದಾಗಿ ಹೇಳಿದೆ. ರಾಮಭಟ್ಟನು ಅಚ್ಯುತರಾಯನ ಅಧಿಕಾರಿಗಳಲ್ಲಿ ಪ್ರಮುಖನಾದವನು. ಆದುದರಿಂದ ಶಾಸನ ಅಚ್ಯುತರಾಯನ ಕಾಲಕ್ಕೆ ಸೇರಿದುದೆಂದು ಊಹಿಸಬಹುದು.

ಶ್ರೀರಂಗಪಟ್ಟಣದ ಒಂದು ಶಾಸನದಲ್ಲಿ ಅಚ್ಯುತರಾಯನ ಆಳ್ವಿಕೆಯ ಉಲ್ಲೇಖವಿದೆ.[22] ಆದರೆ ಶಾಸನದಲ್ಲಿ ಕೊಟ್ಟಿರುವ ತೇದಿಯ ವಿವರಗಳು ತಪ್ಪಾಗಿವೆ. ಶಾಸನದ ಕಾಲ ಕ್ರಿ.ಶ. 1464ನೆಯ ರಕ್ತಾಕ್ಷಿ ಸಂವತ್ಸರದ ಆಷಾಢ ಶುದ್ಧ 12 ಎಂದಿದೆ. ರಕ್ತಾಕ್ಷಿ ಸಂವತ್ಸರಕ್ಕೆ ಸಮನಾದ ಶಕ ಸಂವತ್ಸರ 1486. ಆ ವೇಳೆಗೆ (ಕ್ರಿ.ಸ. 1564) ಅಚ್ಯುತರಾಯನು ದಿವಂಗತನಾಗಿದ್ದನು. ಶಾಸನೋಕ್ತ ಶಕ ವರ್ಷಕ್ಕೆ ಸಮನಾದ ಕ್ರಿ.ಶ. 1542 ಅಚ್ಯುತರಾಯನ ಆಳ್ವಿಕೆಯ ಕೊನೆಯ ವರ್ಷವಾಗುತ್ತದೆ. ಅದು ಶುಭಕೃತ್ ಸಂವತ್ಸರವಾಗಿತ್ತು. ಶಾಸನ ಬಹುಶಃ ಆ ವರ್ಷದಲ್ಲಿ ಹುಟ್ಟಿರಬಹುದು. ಶಾಸನದಲ್ಲಿ ಕುತೂಹಲಕರವಾದ ಅಂಶವೊಂದನ್ನು ಪ್ರಸ್ತಾಪಿಸಲಾಗಿದೆ. ಶ್ರೀರಂಗಪಟ್ಟಣ ಸೀಮೆಯನ್ನು ಅಮರ ಮಾಗಣಿಯಾಗಿ ರಾಮಾಭಟ್ಟಯ್ಯನಿಂದ ಅಪ್ಪಾಜಿಯ ಮಗನಾದ ಪೆದ್ದಿರಾಜನು ಪಡೆದಿರುತ್ತಾನೆ. ಈ ಸೀಮೆಯ ದಳವಾಯಿ ಅಗ್ರಹಾರಗಳೂ, ಮಾನ್ಯ ಗ್ರಾಮಗಳು, ಕರಗ್ರಾಮಗಳಲ್ಲಿದ್ದ ಮಾನ್ಯಗಳು ಹಾಗೂ ಸತ್ರ ದೇವಸ್ಥಾನಗಳಿಂದ ಸುಂಕವನ್ನು ಪಾರುಪತ್ಯ ಮಾಡುತ್ತಿದ್ದ ಕಾಮಪ್ಪನಾಯಕನು ವಸೂಲು ಮಾಡಿರುತ್ತಾನೆ. ಹೀಗೆ ವಸೂಲಿ ಮಾಡಿದ ಒಟ್ಟು ಹಣ 300 ಗದ್ಯಾಣಗಳು. ಆದರೆ ಇದು ಈ ಪೂರ್ವದಲ್ಲಿ ಇರಲಿಲ್ಲ. ಆದ್ದರಿಂದ ಅನುಚಿತವಾಗಿ ಬಂದ ಈ ಹಣವನ್ನು ಪೆದ್ದಿರಾಜನು ಶ್ರೀರಂಗಪಟ್ಟಣದ ದೇವರಿಗೆ, ರಯರಿಗೂ, ರಾಮಭಟ್ಟಯ್ಯನಿಗೂ ಪುಣ್ಯವಾಗಬೇಕೆಂದು ದಾನ ಮಾಡಿದನು. ಅಲ್ಲದೆ ಇನ್ನು ಮುಂದೆ ಇಂತಹ ಸುಂಕವನ್ನು ಪ್ರಜೆಗಳು ಕೊಡಬಾರದೆಂದು ನಿರೂಪ ನೀಡಿದನೆಂದೂ ಶಾಸನ ತಿಳಿಸುತ್ತದೆ. ಇದರಿಂದ ಅಡಿಕೆಯ ಸುಂಕವನ್ನು ಮಹಾಜನರು ತೆರುತ್ತಿದ್ದ ರೆಂದು ತಿಳಿದುಬರುತ್ತದೆ.

ಸದಾಶಿವರಾಯನ ಆಳ್ವಿಕೆಯ ಕಾಲಕ್ಕೆ ಸೇರಿದ ಶಾಸನಗಳ ಪ್ರಕಾರ, ಅರವೀಡು ಮನೆತನಕ್ಕೆ ಸೇರಿದ ನಂದ್ಯಾಲದ ನಾರಸಿಂಗದೇವ ಮಹಾ ಅರಸುವಿನ ಮಗ ಮಹಾಮಂಡಲೀಶ್ವರ ನಾರಯದೇವ ಮಹಾ ಅರಸ ಮಾಡಿದ ಧರ್ಮ ಶಾಸನಗಳನ್ನು ಹೆಸರಿಸುತ್ತದೆ. ಪಾಂಡವಪುರ ಒಂದು ಶಾಸನದ ಪ್ರಕಾರ, ಭಾಷ್ಯಕಾರರು ಎಂದರೆ ರಾಮಾನುಜಚಾರ್ಯರು ಹಿಂದೆ ಬಿಜಯ ಮಾಡಿದ್ದ ಯತಿರಾಜ ಮಠದ ಯತಿಗಳಿಗೆ ನಾರಯದೇವನು ದೇಶಾಮತ್ರಿ ಮುದ್ರೆಯನ್ನು ಉಪಯೋಗಿಸುವ ಹಕ್ಕನ್ನು ನೀಡಿದುದನ್ನು ತಿಳಿಸುತ್ತದೆ.[23] ಇದರಿಂದಾಗಿ ದೇವಸ್ಥಾನದ ಆಸ್ತಿಪಾಸ್ತಿಗಳ ಮೇಲೆ ಈ ಯತಿಗಳಿಗೂ ಹಕ್ಕುವುಂಟಾಯಿತು. ದೇವಸ್ಥಾನಕ್ಕೆ ಪ್ರತಿನಿತ್ಯ ಇಡುವ ಮುದ್ರೆಗೆ ಈ ಯತಿ ತನ್ನ ಮುದ್ರೆಯನ್ನು ಸಹ ಒತ್ತಬೇಕೆಂದು ಸೂಚಿಸಲಾಯಿತು. ದೇವಸ್ಥಾನದ "ಶ್ರೀ ಭಂಡಾರಕೆ ಸಲುವ ರೊಕ್ಕಾದಾಂನ ತಿರುವಾ ಭರಣ ವಸ್ತ್ರಭಂಡಾರ ಮೊದಲಾದುದಕ್ಕೆ ಹನುಮಂತ ಮುದ್ರೆ ನಡುವುದಕ್ಕೆ ಕಟ್ಟು ಮಾಡಿಬಿಟ್ಟೆ

ನಾಟಿಗೆ ನಿಂಮ ಪೊಪ್ಪವನೂ ಯಿಕ್ಕಿತ್ರೀ ಭಂಡಾರ ಮೊದಲಾದ ಸೀಮೆ ಗ್ರಾಮುಗಳಿಗೆ ನಿಂದು ಸಂವಿತಿಯ ಯಿಕ್ಕಿ... ಶ್ರೀ ಭಾಷ್ಯಕಾರರ ಸಂನಿಧಿಯಲಿ ಯಿಹ ರಾಮಾನುಜ ಮುದ್ರೆಗೆ ರಾಜಮುದ್ರೆ ಸಂಗಡ ನಿಮ್ಮ ಮುದ್ರೆಯನು ಯಿಕಿ..." ಎಂಬಲ್ಲಿ ನಾಲ್ಕು ಮುದ್ರೆ, ದೇಶಾಂತ್ರಿಮುದ್ರೆ, ಹನುಮಂತ ಮುದ್ರೆ ಹಾಗೂ ರಾಮಾನುಜಮುದ್ರೆ ಹಾಗೂ ರಾಜಮುದ್ರೆಗಳ ಪ್ರಸ್ತಾಪವಿದೆ ಎನ್ನಬಹುದು. ಶಾಸನದಲ್ಲಿ ಬಳಸಲಾದ ಭಾಷೆ ಸ್ಪಷ್ಟವಾಗಿಲ್ಲವಾದ್ದರಿಂದ ಇದನ್ನು ಅರ್ಥೈಯಿಸುವುದು ಕಷ್ಟಕರ.

ಇದೇ ನಾರಯದೇವ ಮಹಾ ಅರಸನು ಮರುವರ್ಷ (ಕ್ರಿ.ಶ. 1545) ಬಲ್ಲಾಳಪುರ ಮತ್ತು ವರಹನಾಥ ಕಲಹಳಿ ಎಂಬ ಗ್ರಾಮಗಳನ್ನು ಅದಕ್ಕೆ ಸಲುವ ಕಾಲುವಳಿಗಳ ಸಮೇತವಾಗಿ ದಾನ ಮಾಡಿದನು. ಈ ಎರಡು ಗ್ರಾಮಗಳಿಂದ ಬರಬೇಕಾದ ಆದಾಯ ವಾಸ್ತವಿಕವಾಗಿ 2000 ವರಹಗಳು. ಆದರೆ ಕ್ಷಾಮ ಕ್ಷೋಭೆಗಳನ್ನು ಗಮನದಲ್ಲಿಟ್ಟುಕೊಂಡು ಅವುಗಳ ಉತ್ಪನ್ನ 1200 ವರಹಗಳೆಂದು ನಿರ್ಧರಿಸಿ ಅದನ್ನು ದೇವರಿಗೆ ಸಲ್ಲಿಸುವ ಪೂಜೆ, ನೈವೇದ್ಯಗಳ ವೆಚ್ಚಕ್ಕೆಂದೇ ದತ್ತಿಯಾಗಿ ಬಿಟ್ಟನೆಂದು ಶಾಸನದಲ್ಲಿ ಹೇಳಿದೆ. ಈ ನಾರಯದೇವನು ಶ್ರೀರಂಗಪಟ್ಟಣ ಸೀಮೆಯನ್ನು ಅರಸನಿಂದ ನಾಯಕತನಕ್ಕೆಂದು ಪಡೆದಿದ್ದನು.

ಮಹಾಮಂಡಲೇಶ್ವರ ತಿಮ್ಮೆಯದೇವ ಮಹಾ ಅರಸನು ನಾರಸಿಂಗದೇವನ ಇನ್ನೊಬ್ಬ ಮಗ. ಹಿಂದೆ ವೀರಣ್ಣ ನಾಯಕನು ಬಹುಭಾಷ ಪಂಡಿತನೂ, ಜ್ಞಾನಿಯೂ ಆದ ಎಂಬಾರಯನಿಗೆ ನಗುನಹಳ್ಳಿ ಎಂಬ ಗ್ರಾಮವನ್ನು ದಾನವಾಗಿ ನೀಡಿದ್ದನು. ಆದರೆ ಕೃಷ್ಣದೇವರಾಯನು ಈ ಪ್ರಾಂತದ ಮೇಲೆ ದಾಳಿ ಮಾಡಿದ ಸಂದರ್ಭದಲ್ಲಿ ಈ ದಾನವನ್ನು ಮಾನ್ಯ ಮಾಡದೆ ಹಿಂದಕ್ಕೆ ಪಡೆಯಲಾಯಿತು. ನಂತರ ಎಂಬಾರಯನ ಮಗ ಅಪ್ಪಯ್ಯಂಗಾರ್ಯನು ಸುವರ್ಣದ ಗರುಡನನ್ನು ದೇವರಿಗೆ ಸಮರ್ಪಿಸಿದ ಸಂದರ್ಭದಲ್ಲಿ ಆ ಗ್ರಾಮದ ಅರ್ಧಭಾಗವನ್ನು ಆತನಿಗೆ ಕೊಡಲಾಯಿತು. ಈಗ (ಕ್ರಿ.ಶ. 1551) ಆ ಅರ್ಧ ಗ್ರಾಮಕ್ಕೆ ತಿಂಮಯದೇವನು ಇನ್ನರ್ಧವನ್ನು ಸೇರಿಸಿ ದೇವರಿಗೆ ದಾನ ಮಾಡಿದನು. ಗ್ರಾಮದಿಂದ ಬರುವ 50 ವರಹಗಳ ಉತ್ಪನ್ನದಲ್ಲಿ ಕ್ಷಾಮ ಡಾಮರಗಳಿಗಾಗಿ 5 ವರಹಗಳನ್ನು ಕಳೆದು ಉಳಿದ 45 ವರಹಗಳನ್ನು ದೇವಾಲಯ ದತ್ತಿಯಾಗಿ ಪಡೆದು ಅದನ್ನು ಪೂಜೆ ಪುನಸ್ಕಾರಗಳಿಗೆ ಉಪಯೋಗಿಸಬೇಕೆಂದು ಮಾಡಿದ ಧರ್ಮ ಸಾಧನವನ್ನು ಶಾಸನದಲ್ಲಿ ವಿವರಿಸಲಾಗಿದೆ.[24] ಇಲ್ಲಿ ಕೃಷ್ಣರಾಯನ ದಾಳಿ ಗಮನಾರ್ಹ. ಕೃಷ್ಣರಾಯನು ಈ ಪ್ರಾಂತ್ಯಕ್ಕೆ ದಾಳಿ ಯಿಟ್ಟದ್ದು ಉಮ್ಮತ್ತೂರಿನ ಪಾಳೆಗಾರನನ್ನು ಸದೆ ಬಡಿಯಲು ಬಹುಶಃ ಈ ದಾಳಿ ತೀವ್ರವಾಗಿದ್ದು

ಅಂದಿನ ಸಾಮಾಜಿಕ ಜನಜೀವನ ಸಹ ಅಸ್ತವ್ಯಸ್ತವಾಯಿತು. ಪ್ರಾಂತವನ್ನು ವಶಪಡಿಸಿಕೊಂಡ ಅರಸನೋ ಆತನ ಅಧಿಕಾರಿಗಳೋ ಹಿಂದಿನ ದಾನ ಮಾನ್ಯಗಳನ್ನೆಲ್ಲವನ್ನು ಊರ್ಜಿತಗೊಳಿಸಲು ಸಿದ್ಧರಿರಲಿಲ್ಲವೆಂಬುದು ಇದರಿಂದ ತಿಳಿಯುತ್ತದೆ. ಶಾಸನದಲ್ಲಿ ಎಂಬಾರಯನನ್ನು ಶತಭಾಷಶತಪತ್ರ ಸಹಸ್ರಕಿರಣ ಚತುರ್ಮುಖ ಪದವಾಕ್ಯ ಪ್ರಮಾಣಜ್ಞನೆಂದೂ, ವೇದಮಾರ್ಗ ಪ್ರತಿಷ್ಠಾಚಾರ್ಯನೆಂದೂ ವರ್ಣಿಸಲಾಗಿದೆ.

ಮಹಾಮಂಡಲೇಶ್ವರ ಅಪ್ರತಿಕಮಲ್ಲ ಮನುಬ್ರೋಲು ಚೆನ್ನದೇವ ಚೋಡ ಮಹಾ ಅರಸು ಸಿಂದಗಟ್ಟದ ಸ್ಥಳವನ್ನು ಸದಾಶಿವರಾಯನಿಂದ ಅಮರ ಮಾಗಿಣಿಯಾಗಿ ಪಡೆದಿದ್ದನು. ಈತನು ತೆಲುಗು ಚೋಳ ಮನೆತನಕ್ಕೆ ಸೇರಿದಾತ. ಮೇಲುಕೋಟೆಯ ದೇವಸ್ಥಾನಕ್ಕೆ ಸಲ್ಲುವ ಈ ಸ್ಥಳದ ಗ್ರಾಮಗಳಲ್ಲಿ ತಳವಾರನನ್ನು ನೇಮಿಸಲೆಂದು ನಿಗದಿಗೊಳಿಸಿದ ಹಣದಲ್ಲಿ 46 ವರಹಗಳನ್ನು ದೇವಾಲಯದಲ್ಲಿ ಏಳು ನೈವೇದ್ಯಗಳನ್ನು ಸಮರ್ಪಿಸಲೆಂದು ದೇವಾಲಯಕ್ಕೆ ದಾನ ಮಾಡಿದನೆಂದು ಶಾಸನ ತಿಳಿಸುತ್ತದೆ.[25] ಶಾಸನದ ಕೊನೆಯಲ್ಲಿ 46 ವರಹಗಳ ಬದಲು 26 ವರಹಗಳೆಂದು ಬರೆದಿದೆ. ಇದರಲ್ಲಿ ಯಾವುದು ಸರಿ ಎಂದು ಹೇಳಲಾಗದು.

ಮಹಾಮಂಡಲೇಶ್ವರ ಅಪ್ರತಿಕಮಲ್ಲ ಅವು ಬಳದೇವರಾಜನ ಚೋಳ ಮಹಾ ಅರಸನ ಕಾರ್ಯಕರ್ತನಾದ ರಂಗಪಯನು ಹಾಳಾಗಿದ್ದು ಈಗ ಪುನರ್ವಸತಿಗೊಳಿಸಲ್ಪಟ್ಟಿದ್ದ, ಕೆಸವಿನ ಕಟ್ಟೆ ಮತ್ತು ಹಲಸಿನಹಳ್ಳಿ ಗ್ರಾಮಗಳನ್ನು ಬಾಚಯಹಳ್ಳಿಯ ವೀರಭದ್ರದೇವರ ಸ್ಥಾನಿಕ ಹೊಂನಹಲಗೆ ಲಿಂಗಣ್ಣನಿಗೆ ಕಾಣಾಚಿಯಾಗಿ ಕೊಟ್ಟನೆಂದು ಸಂತೇ ಬಾಚಹಳ್ಳಿಯ ಶಾಸನ ತಿಳಿಸುತ್ತದೆ.[26] ಅವು ಬಳದೇವರಾಜಯ ಚೋಳ ಮಹಾಅರಸನು ಸಹ ಅಪ್ರತಿಕಮಲ್ಲನೆಂಬ ಬಿರುದನ್ನು ಪಡೆದಿರುವುದನ್ನು ಗಮನಿಸಿದರೆ ಈತನು ಮೇಲೆ ಗಮನಿಸಿದ ಚೆನ್ನದೇವ ಚೋಡ ಮಹಾ ಅರಸನೂ ಬಹುಶಃ ಒಂದೇ ಮನೆತನಕ್ಕೆ ಸೇರಿದವರೆಂದು ಊಹಿಸಬಹುದು.

ಪಾಂಡವಪುರದ ಶಾಸನವೊಂದು ಸದಾಶಿವ ದೇವ ಮಹಾರಾಯನು ಆಳುತ್ತಿದ್ದಂತೆ ತಿಳಿಸುತ್ತದೆ.[27] ಆದರೆ ಈ ವೇಳೆಗೆ ತಾಳಿಕೋಟೆ ಕದನ ಮುಗಿದಿದ್ದು ಸದಾಶಿವರಾಯನು ಪೆನುಗೊಂಡಗೆ ಓಡಿಹೋಗಿ ಅಲ್ಲಿ ಅರವೀಡು ಶ್ರೀರಂಗ ಮತ್ತು ತಿರುಮಲರ ಅಧೀನದಲ್ಲಿದ್ದನು. ಆದರೂ ಶಾಸನದಲ್ಲಿ ಈತನನ್ನೇ ಹೆಸರಿಸಿರುವುದು ಗಮನಾರ್ಹ. ಸದಾಶಿವನು ಆ ತನಕ ಬದುಕಿದ್ದ

ನೆಂದು ಊಹಿಸಬಹುದು. ಶಾಸನದಲ್ಲಿ ಪ್ರಸ್ತಾಪವಿರುವ ವಿಷಯ ಸ್ವಾರಸ್ಯಕರವಾಗಿದೆ. ಹಿಂದೆ ವೆಲುಗೋಡು ಮನೆತನದ ವಸಂತರಾಯನು ಮೈಲನಹಳ್ಳಿ ಮತ್ತು ಇನ್ನೊಂದು ಗ್ರಾಮವನ್ನು ದೇವಾಲಯದ ಶ್ರೀ ಭಂಡಾರದಿಂದ ಕ್ರಯಕ್ಕೆ ಪಡೆದು ಅದರಿಂದ ಬಂದ ಉತ್ಪನ್ನವನ್ನು ದೇವರಿಗೆ ದಾನವಾಗಿ ನೀಡಿದುದಲ್ಲದೆ ಆ ಧರ್ಮ ಸರಿಯಾಗಿ ನಡೆಯಲೆಂದು ಅನಂತಯ್ಯನೆಂಬ ಒಬ್ಬ ಧರ್ಮಕರ್ತನನ್ನು ಸಹ ನೇಮಿಸಿದನು. ಆದರೆ ಕೆಲಕಾಲ ನಂತರ ಆ ಧರ್ಮವು ಲುಪ್ತವಾದ ಕಾರಣ ವೆಲುಗೊಂಡ ಚಿತ್ರಕೊಂಡಮನಾಯಕನ ಮಗ ರಾಯಪ್ಪನಾಯಕನು ಜಲೆಳ ರಂಗಪತಿ ರಾಚಯ್ಯ ನವರಿಗೆ ಹೇಳಿ ಪೂರ್ವದ ದಾನವನ್ನು ನವೀಕರಿಸಿದನು. ಈ ಬಾರಿ ಅನಂತಯ್ಯನ ಮೊಮ್ಮಗನಾದ ಆಳ್ವಾರು ಸಿಂಗಯ್ಯನು ಧರ್ಮಕರ್ತನಾಗಿ ನಿಯಮಿಸಲ್ಪಟ್ಟನು.

16ನೆಯ ಶತಮಾನದ ಶ್ರೀರಂಗಪಟ್ಟಣದ ಶಾಸನದ ಪ್ರಕಾರ, ತಿರುಮಲದೇವ ಮಹಾರಾಯನ ಮಗ ರಾಮರಾಜರಸನು ಗ್ರಾಮವೊಂದನ್ನು ಕಾಣಾಚಿಯಾಗಿ ದಾನ ಮಾಡಿದುದರ ಪ್ರಸ್ತಾಪವಿದೆ.[28] ಶಾಸನ ಕಾಲದಂದು ಅಳಿಯ ರಾಮರಾಯನ ಸೋದರ ತಿರುಮಲನು ಆಳುತ್ತಿದ್ದರೂ ಆತನ ಮಗ ರಾಮರಾಜನು ಮೈಸೂರಿನ ಸುತ್ತಮುತ್ತಲಿನ ಪ್ರದೇಶದ ಅಧಿಕಾರಿಯಾಗಿದ್ದನೆಂಬುದು ಇತರ ಆಧಾರ ಗಳಿಂದ ತಿಳಿದಿದೆಯಾಗಿ ಶಾಸನೋಕ್ತ ರಾಮರಾಜ ಈ ರಾಮನೇ ಆಗಿರಬಹುದು.

ಮೇಲುಕೋಟೆಯ ಇನ್ನೊಂದು ಶಾಸನದಲ್ಲಿ ಶ್ರೀರಂಗರಾಯ (1) ನು ಆಳುತ್ತಿದ್ದಾಗ ಆತನು ಕೊಮಾರ ರಾಮರಾಜ ಮಹಾ ಅರಸನು ಮೇಲುಕೋಟೆಯ ದೇವಾಲಯದಲ್ಲಿ ಯತಿರಾಜ ಸಪ್ತತಿಯನ್ನು ಪಠಿಸಲು ಸೂಕ್ತ ಏರ್ಪಾಡನ್ನು ಮಾಡಿದರೆಂದು ಶಾಸನ ತಿಳಿಸುತ್ತದೆ.[29] ಇಲ್ಲಿ ಉಕ್ತನಾದ ರಾಮರಾಜ ಮಹಾ ಅರಸನೂ ಮೇಲ್ಕಂಡ ಶಾಸನದ ರಾಮರಾಜ ಅರಸನೇ ಆಗಿರಬೇಕು. ಈತನು ಶ್ರೀರಂಗನ ಸೋದರನಾಗಿದ್ದನು. ಕೊಮಾರ ಎಂಬುದು ಆತನು ಯುವರಾಜನಾಗಿದ್ದ ನೆಂಬುದನ್ನು ಸೂಚಿಸುತ್ತದೆ. ಈ ರಾಮರಾಜನ ಮಗ ತಿರುಮಲರಾಜ ನರಿಹಳ್ಳಿಯ, ಮೇನಾಗರ ಶಾಸನಗಳಲ್ಲಿ ಈತನು ತನ್ನ ತಂದೆ ರಾಮರಾಜಯ್ಯನಿಗೆ ಪುಣ್ಯವಾಗ ಬೇಕೆಂದು ಶ್ರೀರಂಗಧಾಮ ಸ್ವಾಮಿಗೆ (ಶ್ರೀರಂಗಪಟ್ಟಣದ ರಂಗನಾಥನಿಗೆ) ನಾಲ್ಕು ಗ್ರಾಮಗಳನ್ನು ದಾನ ಮಾಡಿದ ಪ್ರಸ್ತಾಪವಿದೆ.[30] ರಾಮರಾಜನು ಕ್ರಿ.ಶ. 1584ನೇ ವರ್ಷಕ್ಕೆ ಮೊದಲೇ ತೀರಿಕೊಂಡು ಆತನ ಮಗ ತಿರುಮಲರಾಜನು ಅಧಿಕಾರಕ್ಕೆ ಬಂದಿರಬೇಕು. ಈ ಎರಡೂ ಶಾಸನಗಳಲ್ಲಿ ಅರಸನ ಉಲ್ಲೇಖವಿಲ್ಲ ದಿದ್ದರೂ ಆಳುತ್ತಿದ್ದ ಅರಸ ಶ್ರೀರಂಗರಾಯನೇ. ಆದುದರಿಂದ ರಾಮರಾಜ ತಿರುಮಲರಾಜನು ಆತನ ಅಧಿಕಾರಿಯಾಗಿದ್ದನೆಂದು ಹಳೇಬೀಡಿನ ಶಾಸನದಿಂದ ಸ್ಪಷ್ಟವಾಗುತ್ತದೆ.[31]

ಇದೇ ಅರಸನ ಮೇಲುಕೋಟೆಯ ಎರಡು ಶಾಸನಗಳ ಪ್ರಕಾರ, ಉಭಯ ವೇದಾಂತ ಚಾರ್ಯನೆನಿಸಿದ ಪೆರಿಯಮಲನಂಬಿಯ ಮಗ ಏಟೂರು ತಾತಾಚಾರ್ಯನಿಗೆ ನೀಡಲಾದ ಕೆಲವು ಹಕ್ಕುಗಳನ್ನು ಹೇಳಿದೆ.[32] ಮೊದಲನೆಯ ಶಾಸನ ಸಂಸ್ಕೃತ ಭಾಷೆಯಲ್ಲಿದ್ದು ಶಿಥಿಲವಾಗಿರುವುದರಿಂದ ಕೆಲವು ವಿವರಗಳು ಹಾಳಾಗಿವೆ. ಶ್ರೀ ಭಾಷ್ಯ ಕೈ(ಕಾ) ಶಿಕಪುರಾಣ, ಶಠಾರಿಸೂಕ್ತ ಮುಂತಾದ ಧರ್ಮಕೃತಿಗಳ ಪಠಣಕ್ಕೆ ಮಾಡಿದ ಏರ್ಪಾಡಿಗೆ ಈ ಶಾಸನಗಳು ಸಂಬಂಧಿಸಿವೆ.

ರಾಮರಾಜ ತಿರುಮಲರಾಜನು ಕೆಂಚನಹಳ್ಳಿ ಶಾಸನದಲ್ಲಿಯೂ ಕಾಣಿಸಿಕೊಂಡಿದ್ದಾನೆ.[33] ಈ ವೇಳೆಗೆ ವಿಜಯನಗರದಲ್ಲಿ ವೆಂಕಟಪತಿಯು ಆಳ ತೊಡಗಿದ್ದರೂ ಶಾಸನದಲ್ಲಿ ಅರಸನ ಪ್ರಸ್ತಾಪವಿಲ್ಲ. ಆದರೆ ಬೆಳಗೊಳದ ಶಾಸನದಲ್ಲಿ ಈ ಅರಸನ ಪ್ರಸ್ತಾಪವಿದ್ದು ಆತನ ಅಣ್ಣ ರಾಮರಾಜನ ಮಗ ತಿರುಮಲರಾಯನು ಮೈಸೂರಿನ ಒಡೆಯರ ಮನೆತನಕ್ಕೆ ಸೇರಿದ ಚಾಮರಸ ಒಡೆಯನ ಮಗ ಬೆಟ್ಟದ ಚಾಮರಸ ಒಡೆಯನಿಗೆ ಸತ್ತಿಗನ ಹಳವನ್ನು ಕೊಡುಗೆಯಾಗಿ ಕೊಟ್ಟನೆಂದೂ, ಆ ಗ್ರಾಮವನ್ನು ಹಾಗೂ ಮಹಾಜನರಿಂದ ಕ್ರಯವಾಗಿ ಪಡೆದ ಮಜ್ಜಿಗೆ ಪುರವಾದ ಶಂಕರಪುರ ಗ್ರಾಮವನ್ನು ಚಾಮರಸ ಒಡೆಯನು ಬೆಳಗೊಳದ ಜನಾರ್ಧನ ದೇವಾಲಯದ ರಾಮಾನುಜ ಕೂಟಕ್ಕೆ ದಾನ ಮಾಡಿದನೆಂದು ತಿಳಿಸುತ್ತದೆ.[34]

ಶ್ರೀರಂಗಪಟ್ಟಣದ ದೇವಸ್ಥಾನದ ಭಂಡಾರದಲ್ಲಿರುವ ತಾಮ್ರ ಶಾಸನದಲ್ಲಿ ಒಂದು ಮುಮ್ಮಡಿ ಶ್ರೀರಂಗರಾಜಯ್ಯ ದೇವನದು.[35] ಈ ಶಾಸನ ತೆಲುಗು ಶಾಸನವಾಗಿದ್ದು ಅರಸನು ಗೋಪಾಲ ರಾಜಯ್ಯನ ಮಗನೆಂದೂ ರಂಗಪ್ಪ ರಾಜಯ್ಯನ ಮೊಮ್ಮಗನೆಂದು ಹೇಳಿದೆ. ಈ ಶ್ರೀರಂಗ ರಾಜಯ್ಯನು ವಾಸ್ತವಿಕವಾಗಿ ಗೋಪಾಲನ ದತ್ತು ಮಗ. ಈತನ ತಂದೆ ಚೆನ್ನವೆಂಕಟ ಅರಸನು ಘನಗಿರಿ (ಪೆನುಗೊಂಡ)ಯಲ್ಲಿ ಆಳುತ್ತಿದ್ದನೆಂದಿದೆ. ಈ ಶಾಸನ ವಿಜಯನಗರದ ಅರಸರ ಕೊನೆಯ ಶಾಸನವಾಗಿದೆ.

ಮೇಲಿನ ವಿವರಣೆಯನ್ನು ಪರಿಶೀಲಿಸಿದರೆ ಅನೇಕ ವಿಷಯಗಳು ಸ್ಪಷ್ಟವಾಗುತ್ತವೆ. 1528ರ ವೇಳೆಗೆ ಶ್ರೀರಂಗಪಟ್ಟಣ ಸೀಮೆ ಎಂಬ ಆಡಳಿತದ ಕೇಂದ್ರವಾಗಿತ್ತು. ಶ್ರೀರಂಗಪಟ್ಟಣ ಸೀಮೆಯೊಳಗೆ ಅನೇಕ ಸ್ಥಳಗಳೆಂಬ ಆಡಳಿತ ವಿಭಾಗಗಳಿದ್ದವು. ಅನೇಕ ಗ್ರಾಮಗಳು ಸೇರಿ ಸ್ಥಳವೆಂಬ ಆಡಳಿತ ವಿಭಾಗವಾಗಿತ್ತು. ಉದಾಹರಣೆಗೆ, ಗುಮ್ಮನವೃತ್ತಿ ಸ್ಥಳವು ಶ್ರೀರಂಗಪಟ್ಟಣ ಸೀಮೆಯಲ್ಲಿ ಇದ್ದು ಆ

ಸ್ಥಳದಲ್ಲಿ ನಾಗಲಪುರ ಎಂಬ ಗ್ರಾಮವಿದ್ದಿತು ಎಂಬುದಾಗಿ ಶ್ರೀರಂಗಪಟ್ಟಣದ ಶಾಸನದಿಂದ ಗೊತ್ತಾಗುತ್ತದೆ.[36] ಇದಲ್ಲದೆ ಶ್ರೀರಂಗಪಟ್ಟಣವು ಈ ವೇಳೆಗೆ ಅಮರನಾಯಕ ವ್ಯವಸ್ಥೆಗೆ ಒಳಪಟ್ಟಿದ್ದಿತು. ಅಮರನಾಯಕರು ವಿಜಯನಗರ ಸಾಮ್ರಾಜ್ಯದ ಆಧಾರಸ್ತಂಭಗಳಾಗಿದ್ದರು. 1528ರಲ್ಲಿ ಮಹಾಮಂಡಲೇಶ್ವರ ಚಮ್ಮಟಬೋಗಯ್ಯ ದೇವ ಮಹಾರಾಜ ಎಂಬುವವನು ಶ್ರೀರಂಗ ಪಟ್ಟಣ ಸೀಮೆಯ ಅಮರನಾಯಕನಾಗಿದ್ದನು. ಈತನು ಅರವೀಡು ವಂಶಕ್ಕೆ ಸೇರಿದವನಾಗಿದ್ದನೆಂದು ಶಾಸನವು ತಿಳಿಸುತ್ತದೆ.[38] ರಂಗನಾಥಸ್ವಾಮಿಯ ದೇವಾಲಯಕ್ಕೆ ಈ ಪ್ರದೇಶದ ಅಮರನಾಯಕರು ದಾನದತ್ತಿಗಳನ್ನು ನೀಡುತ್ತಿದ್ದರು ಎಂಬುದಕ್ಕೆ ಸಾಕಷ್ಟು ಉದಾಹರಣೆಗಳು ದೊರಕುತ್ತವೆ.[38] 1565ರಲ್ಲಿ ಶ್ರೀರಂಗಪಟ್ಟಣ ಸೀಮೆಯ ಪ್ರಸ್ತಾಪ ಬಂದಿದೆ.[39]

ಶ್ರೀರಂಗಪಟ್ಟಣ ಸೀಮೆಯ ಆಡಳಿತದ ಮುಖ್ಯಸ್ಥ ಅಮರನಾಯಕನಾಗಿದ್ದನು. ಬೇರೆ ಬೇರೆಯ ಕಾಲದಲ್ಲಿ ಬೇರೆ ಬೇರೆ ಅಮರನಾಯಕರು ಆಡಳಿತ ನಡೆಸುತ್ತಿದ್ದರು ಎಂಬುದಕ್ಕೆ ಶಾಸನಗಳಲ್ಲಿ ಆಧಾರಗಳು ಇವೆ. ಅಮರನಾಯಕ ನಿಯಂತ್ರಣದಲ್ಲಿ ಪ್ರಭುಗೌಡರು ಮತ್ತು ಸೇನಭೋವರು ಇರುತ್ತಿದ್ದರು. ಇವರು ಸ್ಥಳೀಯ ಮುಖಂಡರಾಗಿದ್ದು ತೆರಿಗೆಗಳನ್ನು ಸಂಗ್ರಹಿಸಿದ ಕಾರ್ಯದಲ್ಲಿ ವಿಜಯನಗರದ ಅಧಿಕಾರಿಗಳಿಗೆ ಸಹಾಯ ಮಾಡುತ್ತಿದ್ದರು ಎಂಬುದಾಗಿ ಹೇಳಬಹುದು.[40]

ಹೀಗೆ 14ನೆಯ ಶತಮಾನದಿಂದ 1610 ರವರೆಗೆ ಶ್ರೀರಂಗಪಟ್ಟಣವು ಹಂತಹಂತವಾಗಿ ತನ್ನ ಖ್ಯಾತಿಯನ್ನು ಪಡೆದುಕೊಳ್ಳುತ್ತಾ 17ನೇಯ ಶತಮಾನದ ಆರಂಭ ಕಾಲಕ್ಕೆ ಅಲ್ಲಿ ವಿಜಯನಗರದ ಪ್ರತಿನಿಧಿ ಅಥವಾ ವೈಸ್ರಾಯಿ ವಾಸ ಮಾಡುತ್ತಿದ್ದ ವಿಷಯ ದಾಖಲೆಗಳಿಂದ ತಿಳಿದುಬರುತ್ತದೆ. ಮೈಸೂರಿನ ಒಡೆಯರು 1610ಕ್ಕೆ ಮುಂಚೆ ವಿಜಯನಗರಕ್ಕೆ ಅಧೀನರಾಗಿ ನಡೆಯುತ್ತಿದ್ದರು. ಶ್ರೀರಂಗ ಪಟ್ಟಣದಲ್ಲಿ ವಿಜಯನಗರದ ರಾಜಪ್ರತಿನಿಧಿಯು ಮೈಸೂರಿನ ಒಡೆಯರನ್ನು ನಿಯಂತ್ರಿಸುತ್ತಿದ್ದನು. ಮೈಸೂರಿನ ಒಡೆಯರು ವಿಜಯನಗರಕ್ಕೆ ಪೊಗದಿಯನ್ನು ವರ್ಷವರ್ಷವೂ ಸಲ್ಲಿಸಬೇಕಾಗಿತ್ತು. ಅರವೀಡು ವಂಶದವರ ಕಾಲದಲ್ಲಿ ವಿಜಯನಗರ ದುರ್ಬಲವಾಗುತ್ತಾ ಸಾಗಿತು. ಆ ಸಂದರ್ಭವನ್ನು ಬಳಸಿಕೊಂಡ ಮೈಸೂರಿನ ಒಡೆಯರು ಸ್ವತಂತ್ರರಾಗಲು ಪರಯತ್ನಿಸಿದರು. ಉದಾಹರಣೆಗೆ, ಮೊದಲನೆ ರಾಜ ಒಡೆಯರಿಗಿಂತ ಮೊದಲ ರಾಜರೆನಿಸಿದ 5ನೇ ಚಾಮರಾಜ ಒಡೆಯರು ಶ್ರೀರಂಗ ಪಟ್ಟಣದ ಖಜಾನೆಗೆ ತಲುಪಿಸಬೇಕಾಗಿದ್ದ ಪೊಗದಿಯನ್ನು ಪಾವತಿ ಮಾಡಿರಲಿಲ್ಲ. ರಾಜ ಒಡೆಯರು ಅಧಿಕಾರವನ್ನು ಸ್ವೀಕರಿಸಿದ ಮೇಲೆ ಕಪ್ಪಕಾಣಿಕೆಯನ್ನು ಕೊಟ್ಟು ವಿಜಯನಗರದ ರಾಜಪ್ರತಿನಿಧಿ

ಯೊಂದಿಗೆ ಉತ್ತಮ ಬಾಂಧವ್ಯವನ್ನು ಸೃಷ್ಟಿಸಿಕೊಂಡರು. ಈ ಮಧ್ಯ ವಿಜಯನಗರದ ಚಕ್ರವರ್ತಿಯಾದ 2ನೇಯ ವೆಂಕಟಪತಿರಾಯನಿಗೂ, ಶ್ರೀರಂಗಪಟ್ಟಣದಲ್ಲಿ ಆಡಳಿತಾಧಿಕಾರಿಯಾಗಿದ್ದ ಅವನ ಸೋದರನ ಮಗ ತಿರುಮಲನಿಗೂ ವಿರಸ ಉಂಟಾಗಿ ರಾಜಕೀಯ ವಾತಾವರಣ ಹದಗೆಟ್ಟಿತು. ಈ ವಿರೋಧ ಪರಿಸ್ಥಿತಿಯನ್ನು ರಾಜ ಒಡೆಯರು ತಮ್ಮ ಸ್ವಂತ ಲಾಭಕ್ಕಾಗಿ ಉಪಯೋಗಿಸಿಕೊಂಡು ಕ್ರಿ.ಶ. 1599ರಿಂದ 1609 ರವರೆಗೆ ಅಕ್ಕಿಹೆಬ್ಬಾಳು, ರಂಗಸಮುದ್ರ, ಹರದನಹಳ್ಳಿ, ಅರಕೆರೆ, ಸೊಸಲೆ, ಬನ್ನೂರು, ಕನ್ನಂಬಾಡಿ, ಯಳಂದೂರು, ಸತ್ಯಗಾಲ ಮತ್ತು ನರಸೀಪುರಗಳನ್ನು ಯುದ್ಧ ಮಾಡಿ ಗೆದ್ದುಕೊಂಡರು. ಅನಂತರ ಅವರು ವೆಂಕಟಪತಿರಾಯನ ಸ್ನೇಹವನ್ನು ಸಂಪಾದಿಸಿ ಶ್ರೀರಂಗಪಟ್ಟಣದ ಪ್ರಾಂತವನ್ನು ಆಳಲು ತಮಗೆ ಅಧಿಕಾರವನ್ನು ದಯಪಾಲಿಸಬೇಕೆಂದು ಬೇಡಿಕೊಂಡರು. ವೆಂಕಟಪತಿರಾಯನು ಆ ಹಕ್ಕನ್ನು ಒಂದು ಸನ್ನದು ಮೂಲಕ ರಾಜ ಒಡೆಯರಿಗೆ ಕೊಟ್ಟನು. ಶ್ರೀರಂಗಪಟ್ಟಣದ ತಿರುಮಲನ ಅಧಿಕಾರವು ದುರ್ಬಲವಾಗಿರುವುದನ್ನು ಕಂಡು ರಾಜ ಒಡೆಯರು ಆ ಪ್ರಾಂತವನ್ನು ಅಪಹರಿಸಲು ಪ್ರಯತ್ನಿಸಿದರು. ಕೊನೆಗೆ ಯುದ್ಧದಿಂದ ಆ ಪ್ರಾಂತವನ್ನು ರಾಜ ಒಡೆಯರು ವಶಪಡಿಸಿ ಕೊಂಡರೋ ಅಥವಾ ಬೇರ್ಯಾವುದೋ ವಿಧಾನದಿಂದ ಗೆದ್ದರೊ ಎಂಬ ವಿಷಯ ಇನ್ನು ಇತ್ಯರ್ಥವಾಗದೆ ಉಳಿದಿದೆ. ಆದರೂ ಪ್ರಚಲಿತವಾಗಿರುವ ಅಭಿಪ್ರಾಯದಂತೆ ರಾಜ ಒಡೆಯರು ತಿರುಮಲನನ್ನು ಶ್ರೀರಂಗಪಟ್ಟಣದಿಂದ ಹೊರಹಾಕಿ ಕ್ರಿ.ಶ. 1610ರಲ್ಲಿ ಅದನ್ನು ವಶಪಡಿಸಿಕೊಂಡರು. ಅನಂತರ ರತ್ನಖಚಿತವಾದ ಸಿಂಹಾಸನವನ್ನೇರಿದರು. ಹೀಗೆ ಶ್ರೀರಂಗಪಟ್ಟಣದೊಡನೆ ವಿಜಯನಗರದ ಸಂಪರ್ಕ ಮುಕ್ತಾಯವಾಯಿತು ಮತ್ತು ಒಡೆಯರ ರಾಜಧಾನಿಯಾಗಿ ಶ್ರೀರಂಗಪಟ್ಟಣದ ಬೆಳವಣಿಗೆ ಆರಂಭವಾಯಿತೆನ್ನಬಹುದು.[41]

ಶ್ರೀರಂಗಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಮೈಸೂರಿನ ಒಡೆಯರು 1610ರಿಂದ 1799 ರವರೆಗೆ ಆಳ್ವಿಕೆಯನ್ನು ಮಾಡಿದರು. ಈ ಅವಧಿಯಲ್ಲಿ ಶ್ರೀರಂಗಪಟ್ಟಣವು ಎಲ್ಲಾ ರೀತಿಯಲ್ಲೂ ಸಂವೃದ್ಧಿ ಮತ್ತು ಅಭಿವೃದ್ಧಿಯನ್ನು ಕಂಡಿತು. 1799ರ ನಂತರ ಅದು ತನ್ನ ಸ್ಥಾನವನ್ನು ಕಳೆದುಕೊಂಡಿತು. ಏಕೆಂದರೆ 1799ರ ನಂತರ ರಾಜಧಾನಿಯನ್ನು ಮೈಸೂರಿಗೆ ವರ್ಗಾಯಿಸಲಾಯಿತು. ಶ್ರೀರಂಗಪಟ್ಟಣದಲ್ಲಿದ್ದ ಬ್ರಿಟಿಷರು ತಮ್ಮ ಕಂಟೋನ್ಮೆಂಟ್‌ನ್ನು ರದ್ದುಗೊಳಿಸಿದರು. ಹೀಗೆ ಅದರ ಅವನತಿ ಆರಂಭವಾಯಿತು. ನಾವು ಮೊದಲು ಶ್ರೀರಂಗಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ ಮೈಸೂರು ಒಡೆಯರ, ದಳವಾಯಿಗಳ, ಹೈದರಾಲಿ, ಟಿಪ್ಪುಸುಲ್ತಾನರ ಸಾಧನೆಗಳನ್ನು ಸ್ಥೂಲವಾಗಿ ಇಲ್ಲಿ ನಿರೂಪಿಸಬಹುದು.

## (ಬಿ) ಮೈಸೂರು ಒಡೆಯರ ಆಳ್ವಿಕೆ

**ರಾಜ ಒಡೆಯರು (1578–1617):** ಶ್ರೀರಂಗಪಟ್ಟಣದಲ್ಲಿ ರಾಜಕೀಯ ಸ್ಥಿರತೆ ಹಾಗೂ ಬೆಳವಣಿಗೆ ಒಡೆಯರ ಕಾಲದಿಂದಲೇ ಪ್ರಾರಂಭವಾಯಿತೆನ್ನಬಹುದು. ರಾಜ ಒಡೆಯರು ಕ್ರಿ.ಶ. 1610ರಲ್ಲಿ ವಿಜಯನಗರದ ದುರ್ಬಲ ಪ್ರತಿನಿಧಿಯನ್ನು ಉಚ್ಚಾಟನೆ ಮಾಡಿ ಶ್ರೀರಂಗಪಟ್ಟಣವನ್ನು ವಶಪಡಿಸಿ ಕೊಂಡು ರಾಜಧಾನಿಯನ್ನು ಮೈಸೂರಿನಿಂದ ಶ್ರೀರಂಗಪಟ್ಟಣಕ್ಕೆ ವರ್ಗಾವಣೆ ಮಾಡಿದ ಮೇಲೆ ರಾಜಕೀಯ ರಂಗದಲ್ಲಿ ಹೊಸ ತಿರುವನ್ನು ಪಡೆದುಕೊಂಡಿತು ಎನ್ನಬಹುದು.[42] ರಾಜ ಒಡೆಯರು ಅಧಿಕಾರ ವಹಿಸಿಕೊಂಡಾಗ ಶ್ರೀರಂಗಪಟ್ಟಣದ ಪ್ರಾಂತ್ಯದ ಅಕ್ಕಪಕ್ಕದ ಪಾಳೆಯಗಾರರನ್ನು ಸದೆ ಬಡಿದುದಲ್ಲದೆ ಶ್ರೀರಂಗಪಟ್ಟಣದ ಎಲ್ಲೆಯನ್ನು ವಿಸ್ತರಿಸಿದರು. ಹೆಗ್ಗಡದೇವನಕೋಟೆ ತಾಲ್ಲೂಕಿನ ಸರಗೂರು, ಚಾಮರಾಜನಗರ ತಾಲ್ಲೂಕಿನ ರಾಮಸಮುದ್ರ ಮತ್ತು ಹರಪನಹಳ್ಳಿ, ತಿರುಮಕೂಡಲು ನರಸೀಪುರ ತಾಲ್ಲೂಕಿನ ಮೂಗೂರು ಕೃಷ್ಣರಾಜಪೇಟೆಯ ಕಿಕ್ಕೇರಿ ಮತ್ತು ಹೊಸಹೊಳಲು ಅಲ್ಲದೆ ತೆರಕಣಾಂಬಿ, ಬಿಳಿಕೆರೆ, ಕಾರಗಳ್ಳಿ ಈ ಪ್ರಾಂತ್ಯಗಳನ್ನು ರಾಜ ಒಡೆಯರು ವಶಪಡಿಸಿಕೊಂಡು ತಮ್ಮ ರಾಜ್ಯವನ್ನು ಬಹು ವಿಧವಾಗಿ ಅಭಿವೃದ್ಧಿಪಡಿಸಿದರು.[43]

ರಾಜ್ಯವು ದೊಡ್ಡದಾಗಿ ರಾಜರಿಗೆ ಆಡಳಿತ ಕಾರ್ಯದಲ್ಲಿ ಕೆಲಸ ಕಾರ್ಯಗಳು ಹೆಚ್ಚಾದುದರಿಂದ ಸೇನೆಯನ್ನು ನಡೆಸಲು ದಳವಾಯಿ ಹುದ್ದೆಯನ್ನು ಸ್ಥಾಪಿಸಿದರು.[44] 1578ರಲ್ಲಿ ಪಟ್ಟಕ್ಕೆ ಬಂದಂದಿನಿಂದ ಎಡಬಿಡದೆ ನಾನಾ ಕಾರ್ಯಗಳಲ್ಲಿ ನಿರತರಾಗಿ ಹಾಗೂ ಶ್ರೀರಂಗಪಟ್ಟಣದ ಅಭಿವೃದ್ಧಿಯ ಅವಿಶ್ರಾಂತ ದುಡಿಮೆಯಿಂದ ಬಳಲಿ ಆರೋಗ್ಯವನ್ನು ಕಳೆದುಕೊಂಡು ಕ್ರಿ.ಶ. 1617ರಲ್ಲಿ ಮೃತರಾದರು. (ಇವರ ಭಾವ ಚಿತ್ರವನ್ನು ಮೇಲುಕೋಟೆಯ ನಾರಾಯಣಸ್ವಾಮಿ ದೇವಾಲಯದ ಸ್ತಂಭವೊಂದರಲ್ಲಿ ಕೆತ್ತಲಾಗಿದೆ).

### ಆರನೆಯ ಚಾಮರಾಜ ಒಡೆಯರು (1617–1637)

ರಾಜ ಒಡೆಯರು ಮರಣ ಹೊಂದಿದ ಮೇಲೆ ಅವರ ಮೊಮ್ಮಗನಾದ 6ನೇ ಚಾಮರಾಜ ಒಡೆಯರ್ ರವರು ಶ್ರೀರಂಗಪಟ್ಟಣದ ಸಿಂಹಾಸನವನ್ನೇರಿದರು. ಇವರು ಪಟ್ಟಕ್ಕೆ ಬಂದಾಗ ಹದಿನೈದರ ಹರೆಯದವನಾಗಿದ್ದುದರಿಂದ ಆಡಳಿತದ ಜವಾಬ್ದಾರಿಯೆಲ್ಲ ದಳವಾಯಿ ಬೆಟ್ಟದ ಅರಸುವಿನ ಕೈ ಸೇರಿತು. ಚಾಮರಾಜರು ವಯಸ್ಸಿಗೆ ಬಂದಾಗ ಹೆಚ್ಚು ಕಡಿಮೆ ರಾಜ ಒಡೆಯರ ನೀತಿಯನ್ನೇ ಅನುಸರಿಸಿದರು. ಪ್ರಾಂತ್ಯಗಳ ವಿಸ್ತರಣೆಗೆ ಪ್ರಾಶಸ್ತ್ಯ ನೀಡಿದರಲ್ಲದೆ ಅಳಿದುಳಿದ

ಪ್ರಾಂತ್ಯಗಳಾದ ಮದ್ದೂರು, ಮಳವಳ್ಳಿ, ಸಿಂಧಘಟ್ಟ, ನಾಗಮಂಗಲ ವಶಪಡಿಸಿಕೊಂಡಿದುದ್ದಲ್ಲದೆ 1630ರಲ್ಲಿ ಚನ್ನಪಟ್ಟಣದ ಪಾಳೆಯ ಪಟ್ಟನ್ನು ವಿಲೀನಗೊಳಿಸಿದನು.[45] ಚಾಮರಾಜ ಒಡೆಯರು ಕ್ರಿ.ಶ. 1637ರಲ್ಲಿ ಮರಣ ಹೊಂದಿದನು.

ಇವರ ತರುವಾಯ ಇಮ್ಮಡಿ ರಾಜ ಒಡೆಯರು ಪಟ್ಟಕ್ಕೆ ಬಂದರಾದರೂ, ರಾಜಸ್ಥಾನದಲ್ಲಿ ಸಂಚುಮಾಡಿ ವಿಷ ಕೊಟ್ಟಿದ್ದರಿಂದ ಅಲ್ಪ ಕಾಲದಲ್ಲಿಯೇ ಮರಣ ಹೊಂದಿದನು.

### ರಣಧೀರ ಕಂಠೀರವ ನರಸರಾಜ ಒಡೆಯರ್ (1638-1659)

ಕಂಠೀರವನು ಆಡಳಿತದ ಚುಕ್ಕಾಣಿಯನ್ನು ಹಿಡಿದ ತರುವಾಯದಲ್ಲಿ ಶ್ರೀರಂಗಪಟ್ಟಣ ಸಂಕಷ್ಟದ ಸ್ಥಿತಿಯಲ್ಲಿತು. ಧೈರ್ಯ, ಬುದ್ಧಿವಂತಿಕೆ ಮತ್ತು ಸಾಮರ್ಥ್ಯಗಳಿಗೆ ಹೆಸರಾಗಿದ್ದ ಕಂಠೀರವನು ಶ್ರೀರಂಗಪಟ್ಟಣವನ್ನು ತನ್ನ ಹಿಡಿತಕ್ಕೆ ತಂದನು. ಕ್ರಿ.ಶ. 1638ರಲ್ಲಿ ಬಿಜಾಪುರದ ಸೈನ್ಯಾಧಿಪತಿಯಾಗಿದ್ದ ರಣದುಲ್ಲಾಖಾನ್ ಮತ್ತು ಶಿವಾಜಿ ಮಹಾರಾಜನ ತಂದೆಯೂ ಎರಡನೇ ಸೈನ್ಯಾಧಿಪತಿಯೂ ಆದ ಷಹಜಿ ಇವರ ನೇತೃತ್ವದಲ್ಲಿ ಬಿಜಾಪುರದ ಸೈನ್ಯವು ದಿಢೀರನೆ ಶ್ರೀರಂಗಪಟ್ಟಣವನ್ನು ಮುತ್ತಿತು. ಅವರು ಕೋಟೆಯನ್ನು ಮುತ್ತಿ, ಕೋಟೆಯನ್ನು ಬಿರುಕನ್ನುಂಟು ಮಾಡುವಲ್ಲಿಯೂ ಯಶಸ್ವಿಯಾಗಿದ್ದರು. ಆದರೆ ಅಂತಿಮವಾಗಿ ಅವರನ್ನು ಯಶಸ್ವಿಯಾಗಿ ಹಿಮ್ಮೆಟ್ಟಿಸಿ ಅಲ್ಲಿಂದ ಕಾಲು ಕೀಳುವಂತೆ ಮಾಡಿದನು.[46] ಹೀಗೆಯೇ ಮಧುರೆ, ಇಕ್ಕೇರಿ ಮತ್ತು ನಾಗಮಂಗಲದ ನಾಯಕರುಗಳು ಶ್ರೀರಂಗಪಟ್ಟಣಕ್ಕೆ ತೊಂದರೆ ಕೊಡಲು ಪ್ರಯತ್ನಿಸಿದರು.[47] ಆದರೆ ಕಂಠೀರವ ನರಸರಾಜನ ಧೈರ್ಯ, ಸಾಹಸಗಳಿಂದ ಅವರೆಲ್ಲರ ಆಸೆಗಳಲ್ಲ ವಿಫಲವಾದವು. ನಂತರ ರಾಜ್ಯವನ್ನು ವಿಸ್ತರಿಸಲು ನಿರ್ಧರಿಸಿ ಪ್ರತಿಯಾಗಿ ಆಕ್ರಮಣವೆಸಗಿದನು. ಅವನು ಕೊಯಮತ್ತೂರು ಜಿಲ್ಲೆಯ ಕಾವೇರಿಪುರ, ಹಂಪಾಪುರ, ಬೆಟ್ಟದಪುರ, ಪಿರಿಯಾಪಟ್ಟಣ, ಅರಕಲಗೂಡು, ಕುಣಿಗಲ್ಲು, ರತ್ನಗಿರಿ, ದಣ್ಣಾಯಕನ ಕೋಟೆ, ಸತ್ಯಮಂಗಲ, ಹೊಸೂರು ಮತ್ತು ಕೆಂಪೇಗೌಡನಿಂದ ಯಲಹಂಕ[48] ಇವುಗಳನ್ನೆಲ್ಲಾ ವಶಪಡಿಸಿಕೊಂಡನು. ಅವನ ಆಕ್ರಮಣಗಳು ಇಕ್ಕೇರಿ, ಚಿತ್ರದುರ್ಗ ಮತ್ತು ಸಿರಾದ ಗಡಿಗಳವರೆಗೂ ನಡೆದವು. ಹೀಗೆ ಶ್ರೀರಂಗಪಟ್ಟಣ ಕಂಠೀರವರ ಸಾಧನೆಯಿಂದ ಒಂದು ಬಲಿಷ್ಟ ರಾಜ್ಯವಾಗಿ ರೂಪುಗೊಂಡಿತು.

**ದೊಡ್ಡದೇವರಾಜ ಒಡೆಯರ್ (1659-1673)**

ರಣಧೀರ ಕಂಠೀರವ ನರಸರಾಜ ಒಡೆಯರ್ ತರುವಾಯ ಶ್ರೀರಂಗಪಟ್ಟಣದ ಸಿಂಹಾಸನದ ಚುಕ್ಕಾಣಿಯನ್ನು ಹಿಡಿದವರೆಂದರೆ ದೊಡ್ಡ ದೇವರಾಜ ಒಡೆಯರು. ಈತನು ಶಿವಾಜಿ ಮತ್ತು ಔರಂಗ ಜೇಬರ ಸಮಕಾಲೀನನಾಗಿದ್ದನು. ಔರಂಗಜೇಬನು ದಖನ್‌ನಲ್ಲಿ ನಡೆಸಿದ ಕಾರ್ಯಾಚರಣೆಗಳು ಶ್ರೀರಂಗಪಟ್ಟಣದ ಮೇಲೂ ಪರಿಣಾಮ ಬೀರಿದವು. ರಣದುಲ್ಲಾಖಾನನ ಆಕ್ರಮಣ, ಮಧುರೆಯ ನಾಯಕನ ಆಕ್ರಮಣವನ್ನು ತಡೆಗಟ್ಟಿದಲ್ಲದೆ ಈರೋಡು, ದಾರಾಪುರ ಮುಂತಾದ ಪ್ರಾಂತ್ಯಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡರು.[49] ಅಲ್ಲದೆ, ಬಿದನೂರಿನಿಂದ ಶಿವಪ್ಪನಾಯಕನು ಆಗಾಗ್ಗೆ ದಂಡೆತ್ತಿ ಬರುತ್ತಿದ್ದನ್ನು ಮನಗಂಡು ಅವನನ್ನು ಸದೆ ಬಡಿದು ಶ್ರೀರಂಗಪಟ್ಟಣವನ್ನು ರಕ್ಷಿಸಿದನು. ಕ್ರಿ.ಶ. 1665ರಲ್ಲಿ ಇಕ್ಕೇರಿಯ ಸೋಮಶೇಖರ ನಾಯಕನನ್ನು ಸೋಲಿಸಲಾಯಿತು. ಮಾಗಡಿ, ಮಧುಗಿರಿ, ಕೊರಟಗೆರೆಗಳ ಜೊತೆಗೆ ಹಾಸನ ಮತ್ತು ಸಕಲೇಶಪುರಗಳನ್ನು ಸಹ ದೊಡ್ಡ ದೇವರಾಜರು ವಶಪಡಿಸಿಕೊಂಡರು. ಶ್ರೀರಂಗಪಟ್ಟಣದ 14ನೇಯ ಶಾಸನ ದೊಡ್ಡದೇವರಾಜ ಒಡೆಯರ ಯುದ್ಧ ಸಾಮರ್ಥ್ಯವನ್ನು ಅವರ ದಿಗ್ವಿಜಯಗಳನ್ನು ರೋಚಕವಾಗಿ ವರ್ಣಿಸುತ್ತದೆ.

**ಚಿಕ್ಕದೇವರಾಜ ಒಡೆಯರ್ (1673-1704)**

ದೊಡ್ಡ ದೇವರಾಜರ ತರುವಾಯ ಅವನ ಸೋದರಳಿಯ ಚಿಕ್ಕದೇವ ರಾಜನು ಉತ್ತರಾಧಿ ಕಾರಿಯಾಗಿ ಬಂದನು. ಚಿಕ್ಕದೇವರಾಜರು ಮರಾಠರ, ದಖನ್ನಿನ ಮಹಮ್ಮದೀಯರ, ಮೊಗಲ್ ಬಾದಶಹ ಔರಂಗಜೇಬರ, ಮಧುರೆಯ ನಾಯಕರ ಮತ್ತು ಕರ್ನಾಟಕದ ಹಲವಾರು ಪಾಳೆಯಗಾರರ ಸಮಕಾಲೀನರಾಗಿದ್ದರು.[50] ಅಲ್ಲದೆ ಚಿಕ್ಕದೇವರಾಜರ ಕಾಲದಲ್ಲಿಯೇ ದಕ್ಷಿಣ ಭಾರತದ ಇತಿಹಾಸದಲ್ಲಿ ಮಹತ್ತರ ಬದಲಾವಣೆಳಾದವು. ಅದೇ ತಾನೇ ಮರಾಠರು ಬೆಳೆಯುತ್ತಿದ್ದರು. ಮೊಗಲರು ದಖನ್ ಮತ್ತು ದಕ್ಷಿಣ ಭಾರತದ ರಾಜಕೀಯ ರಂಗದಲ್ಲಿ ದಿಢೀರನೆ ಪ್ರವೇಶಿಸಿ ಅಷ್ಟೇ ಬೇಗ ಕಣ್ಮರೆ ಯಾದರೂ ಸಹ ವಾಸ್ತವವಾಗಿ ಪರಮಾಧಿಕಾರ ಹೊಂದಿದ್ದರು. ಔರಂಗಜೇಬನ ವಿಸ್ತರಣಾಕಾಂಕ್ಷೆಗೆ ಬಲಿಯಾಗಿ ಬಿಜಾಪುರ ಮತ್ತು ಗೋಲ್ಕೊಂಡಗಳ ಷಾಹಿ ರಾಜ್ಯಗಳು ನಿರ್ನಾಮವಾದವು. ಇಂತಹ ಕಾಲದಲ್ಲಿ ಶ್ರೀರಂಗಪಟ್ಟಣವನ್ನು ಪ್ರಬಲ ಶಕ್ತಿಯಾಗಿ ರೂಪಿಸುವುದು ಚಿಕ್ಕದೇವರಾಜ ಒಡೆಯರ ಆಕಾಂಕ್ಷೆಯಾಗಿತ್ತು.

ಚಿಕ್ಕದೇವರಾಜ ಒಡೆಯರು ಪ್ರಬಲ ರಾಜ್ಯಗಳೊಡನೆ ಎದುರು ಬೀಳುವ ಮೊದಲು ಸಣ್ಣ ಸಣ್ಣ ರಾಜ್ಯಗಳನ್ನು ಅಡಗಿಸಲು ತಾನಾಗಿಯೇ ಇಷ್ಟಪಟ್ಟನು. ಶ್ರೀರಂಗಪಟ್ಟಣದ ಮೇಲೆ ದಾಳಿಮಾಡಿ ಹಿಂದೆ ಸರಿದಿದ್ದ ಮಧುರೆಯ ಚೊಕ್ಕನಾಥನ ವಿರುದ್ಧ ಯುದ್ಧ ಕೈಗೊಂಡನು. ಇಕ್ಕೇರಿಯ ಬಸಪ್ಪನಾಯಕನನ್ನು ಸೋಲಿಸಿದನು. ಕ್ರಿ.ಶ. 1675ರಲ್ಲಿ ಶಿವಾಜಿಯು ಶ್ರೀರಂಗಪಟ್ಟಣವನ್ನು ಮುತ್ತಲು ಯತ್ನಿಸಿದಾಗ ಚಿಕ್ಕದೇವರಾಜನು ಧೈರ್ಯದಿಂದ ಎದುರಿಸಿದನು. ಅವನು ಯುದ್ಧ ತಂತ್ರದಲ್ಲಿ ನಿಪುಣ ನಾಗಿದ್ದು ಶಿವಾಜಿಯ ಆಕ್ರಮಣವನ್ನು ಹಿಮ್ಮೆಟ್ಟಿಸಿದನು.[51] ಕ್ರಿ.ಶ. 1687ರಲ್ಲಿ ಅವನು ಬೆಂಗಳೂರು ಜಹಗೀರ್ ಸಮಸ್ಯೆಯನ್ನು ಬಹು ಚಾಕಚಕ್ಯತೆಯಿಂದ ನಿಭಾಯಿಸಿದನು. ಚಿಕ್ಕದೇವರಾಜನು ಬೆಂಗಳೂರನ್ನು ಏಕೋಜಿಯಿಂದ ಕೊಂಡುಕೊಂಡದ್ದು ಬಹುಬುದ್ಧಿವಂತಿಕೆಯ ಕಾರ್ಯವಾಗಿ ಪರಿಣಮಿಸಿತು.[52] ಇದರಿಂದ ತರುವಾಯದ ಘಟನೆಗಳಲ್ಲಿ ತೀವ್ರತರವಾದ ಬದಲಾವಣೆಗಳುಂಟಾದವು. ಮರಾಠರು ತಮ್ಮ ರಾಜ್ಯವನ್ನು ದಕ್ಷಿಣದ ಕಡೆಗೆ ವಿಸ್ತರಿಸುವಲ್ಲಿ ಆಸಕ್ತಿ ತೋರಲಿಲ್ಲ. ಅವರು ಹೆಚ್ಚು ಅವಕಾಶವಿದ್ದ ಉತ್ತರದ ಕಡೆ ತಮ್ಮ ಗಮನ ಕೇಂದ್ರೀಕರಿಸಿದರು. ಆದಾಗ್ಯೂ ಕ್ರಿ.ಶ. 1686ರಲ್ಲಿ ಔರಂಗಜೇಬನು ಮರಾಠರು ಮತ್ತು ಷಾಹಿ ರಾಜ್ಯಗಳ ಮೇಲೆ ತೀವ್ರ ಸ್ವರೂಪದ ದಾಳಿ ಎಸಗಿದನು. ಅವನು ಬಿಜಾಪುರ ಮತ್ತು ಗೋಲ್ಕೊಂಡ ರಾಜ್ಯಗಳನ್ನು ನಿರ್ಮೂಲನೆ ಮಾಡುವಲ್ಲಿ ಯಶಸ್ವಿಯಾದ ನಲ್ಲದೆ ತಾತ್ಕಾಲಿಕವಾಗಿ ಮರಾಠರನ್ನು ಅಡಗಿಸಿದನು. ಇದರಿಂದ ಚಿಕ್ಕದೇವರಾಜನು ಸದ್ಯಕ್ಕೆ ತನ್ನ ಈ ಎರಡು ನೆರೆಹೊರೆಯ ಶತ್ರುರಾಜ್ಯಗಳ ಪೀಡನೆಯಿಂದ ಮುಕ್ತನಾದನು. ಅವನು ಮೊಗಲರ ಪರಮಾಧಿಕಾರವನ್ನು ಒಪ್ಪಿಕೊಂಡು, ಔರಂಗಜೇಬನಿಗೆ ನಾಮಮಾತ್ರವಾಗಿ ನಿಷ್ಠವಾಗಿರುವುದನ್ನು ಬಿಟ್ಟರೆ ಇಡೀ ಕರ್ನಾಟಕದಲ್ಲಿ ಶ್ರೇಷ್ಟ ರಾಜನಾದನು. ಹೀಗೆ ಚಿಕ್ಕದೇವರಾಜನು ತನ್ನ ಮುತ್ಸದ್ಧಿತನ ದಿಂದ ರಾಜಕೀಯ ರಂಗದಲ್ಲಿ ಶ್ರೀರಂಗಪಟ್ಟಣಕ್ಕೆ ಮಹತ್ವದ ಸ್ಥಾನ ಲಭಿಸಿತು.

## ಚಿಕ್ಕದೇವರಾಜ ಒಡೆಯರ್‌ರವರ ತರುವಾಯದ ರಾಜರುಗಳು

ಚಿಕ್ಕದೇವರಾಜ ಒಡೆಯರ ತರುವಾಯ ಹಲವಾರು ರಾಜರುಗಳು ಶ್ರೀರಂಗಪಟ್ಟಣದಲ್ಲಿ ಆಳ್ವಿಕೆಯನ್ನು ನಡೆಸಿದ್ದಾರೆ. ಇಮ್ಮಡಿ ಕಂಠೀರವ ನರಸರಾಜ ಒಡೆಯರ್ (1704–1713), ದೊಡ್ಡ ಕೃಷ್ಣರಾಜ ಒಡೆಯರ್ (1714–1732), 7ನೇ ಚಾಮರಾಜ ಒಡೆಯರ್ (1732–1734), ಚಿಕ್ಕ ಕೃಷ್ಣರಾಜ ಒಡೆಯರ್ (1734–1766), ನಂಜರಾಜ ಒಡೆಯರ್ (1766–1770), ಬೆಟ್ಟದ ಚಾಮರಾಜ ಒಡೆಯರ್ (1770–1776), ಖಾಸಾ ಚಾಮರಾಜ ಒಡೆಯರ್ (1776–1796), ಮುಮ್ಮಡಿ ಕೃಷ್ಣರಾಜ ಒಡೆಯರ್ (1799–1831). ಈ ಯಾವ ರಾಜರುಗಳಿಗೂ ಶಕ್ತಿ ಸಾಮರ್ಥ್ಯವಾಗಲೀ, ದೂರ

ದೃಷ್ಟಿಯಾಗಲೀ, ರಾಜನೀತಿ ವಿಚಕ್ಷಣತೆಯಾಗಲೀ ಇರಲಿಲ್ಲವೆಂದೇ ಹೇಳಬಹುದು. ಆದರೂ ಈ ರಾಜರುಗಳು ಅಕ್ಕಪಕ್ಕದ ಪಾಳೆಯಗಾರರು, ಸುಲ್ತಾನರುಗಳು ಹಾಗೂ ರಾಜರುಗಳಿಗೆ ಶ್ರೀರಂಗಪಟ್ಟಣ ವನ್ನು ಒಪ್ಪಿಸದೆ ಶ್ರೀರಂಗಪಟ್ಟಣದ ಪುರೋಭಿವೃದ್ಧಿಗಾಗಿ ಶ್ರಮಿಸಿದ್ದಾರೆಂದು ಹೇಳಬಹುದು. ಈ ರಾಜರುಗಳ ಆಡಳಿತಾವಧಿಯಲ್ಲಿ ದಳವಾಯಿಗಳ ಪ್ರಾಬಲ್ಯವೇ ಮೇಲಾಗಿತ್ತು. ದಳವಾಯಿ ಕಂಠೀರವ, ದಳವಾಯಿ ಬಸವರಾಜಯ್ಯ, ದಳವಾಯಿ ದೇವರಾಜಯ್ಯ ಮತ್ತು ದಳವಾಯಿ ನಂಜರಾಜಯ್ಯನವೆ ಪ್ರಾಬಲ್ಯವೇ ಅಧಿಕವಾಗಿದ್ದಿತು. ಆದರೂ ಈ ದಳವಾಯಿಗಳಲ್ಲಿ ರಾಜ್ಯ ವ್ಯವಹಾರಗಳು ಪ್ರಬಲ ರಾಜನ ನಿಯಂತ್ರಣದಲ್ಲಿದ್ದಷ್ಟು ಕಾಲ ರಾಜ್ಯದ ಆಗು-ಹೋಗುಗಳಲ್ಲಿ ಅಷ್ಟಾಗಿ ಇರಲಿಲ್ಲವೆಂದೇ ಹೇಳಬಹುದು.

### (ಸಿ) ದಳವಾಯಿಗಳ ಆಳ್ವಕೆ

ಕರ್ನಾಟಕದ ಇತಿಹಾಸದಲ್ಲಿ ಅದರಲ್ಲೂ ಮುಖ್ಯವಾಗಿ ಮೈಸೂರು ಸಂಸ್ಥಾನದ ಇತಿಹಾಸದಲ್ಲಿ ದಳವಾಯಿಗಳು ವಹಿಸಿದ ಪಾತ್ರ ಬಹಳ ಮುಖ್ಯವಾಗಿದೆ. ರಾಜ ಒಡೆಯರ ಕಾಲದಲ್ಲಿ ಅಸ್ಥಿತ್ವಕ್ಕೆ ಬಂದ ದಳವಾಯಿತನ (ಹುದ್ದೆ) ಹೈದರಾಲಿಯ ಅಭ್ಯುದಯದವರೆಗೂ ಮುಂದುವರಿದುಕೊಂಡು ಬಂದಿತು. ಈ ಅವಧಿಯಲ್ಲಿ ಮೈಸೂರು ಸಂಸ್ಥಾನದಲ್ಲಿ ದಳವಾಯಿತನ ವಹಿಸಿದ ಕರಿಕಾಲ ಮಲ್ಲರಾಜ, ನಂದಿನಾಥಯ್ಯ, ಕುಮಾರಯ್ಯ, ದೊಡ್ಡಯ್ಯ, ಕಾಂತಯ್ಯ, ನಂಜರಾಜಯ್ಯ, ಬಸವರಾಜಯ್ಯ, ಮಲ್ಲರಾಜಯ್ಯ, ವೀರರಾಜಯ್ಯ, ದೇವರಾಜಯ್ಯ ಮೊದಲಾದ ದಳವಾಯಿಗಳು ಮೈಸೂರು ಒಡೆಯರ ಅವಿಭಾಜ್ಯ ಅಂಗವಾಗಿದ್ದರು. ಒಟ್ಟಾರೆ ದಳವಾಯಿಗಳು ಮೈಸೂರು ಸಂಸ್ಥಾನದಲ್ಲಿ ಅದರಲ್ಲೂ ಮುಖ್ಯವಾಗಿ ಚಿಕ್ಕದೇವರಾಜ ಒಡೆಯರ ಉತ್ತರಾಧಿಕಾರಿಗಳ ಆಳ್ವಿಕೆಯ ಕಾಲವನ್ನು 'ದಳವಾಯಿಗಳ ಆಧಿಪತ್ಯದ ಕಾಲ" ಎಂದು ಇತಿಹಾಸಕಾರರು ಪರಿಗಣಿಸಿದ್ದಾರೆ.[53] ಕ್ರಿ.ಶ. 1704 ರಿಂದ 1761 ರವರೆಗೆ ಇದ್ದ ದಳವಾಯಿಗಳ ಸಾಧನೆಗಳನ್ನು ಸ್ಥೂಲವಾಗಿ ಇಲ್ಲಿ ಚರ್ಚಿಸಲಾಗಿದೆ.

ಚಿಕ್ಕದೇವರಾಜ ಒಡೆಯರ ನಂತರ ಬಂದ ದೊರೆಗಳು ಅಸಮರ್ಥರಾಗಿದ್ದರು. ಮೈಸೂರು ರಾಜ್ಯಕ್ಕೆ ಹಲವಾರು ಶತ್ರುಗಳಿಂದ ಅಪಾಯವು ಕಾದಿದ್ದಿತು. ಒಡೆಯರ ಅಲಕ್ಷತೆಯ ಉಪಯೋಗವನ್ನು ಪಡೆದು ದಳವಾಯಿಗಳು ಬಲಿಷ್ಟರಾದರು. ದೇವರಾಜಯ್ಯ ಮಹಾ ಸಾಹಸಿಯೂ, ನುರಿತ ಸೇನಾನಿಯೂ ಆಗಿದ್ದನು. ಮೈಸೂರಿನ ಮೇಲೆ ದಾಳಿ ನಡೆಸಿದ ಪೇಶ್ವೆ ಬಾಜೀರಾಯನ

ಸೈನ್ಯವನ್ನು ಹಿಮ್ಮೆಟ್ಟಿಸಿದುದು ಇವನ ಶೌರ್ಯದ ಒಂದು ಮುಖ್ಯ ಉದಾಹರಣೆಯಾಗಿದೆ. ಮೊಗಲರನ್ನು ನಡುಗಿಸಿ ಇಡೀ ಹಿಂದೂಸ್ಥಾನದಲ್ಲೇ ಅಜೇಯನೆನಿಸಿಕೊಂಡಿದ್ದ ಪೇಶ್ವೆ ಬಾಜೀರಾಯನು 1725ರಲ್ಲಿ ಶ್ರೀರಂಗಪಟ್ಟಣದ ಮೇಲೆ ದಾಳಿ ನಡೆಸಿದ. ದೇವರಾಜಯ್ಯನು ಪಿರಂಗಿಗಳ ಪರಿಣಾಮಕಾರಿ ಬಳಕೆಯಿಂದ ಶತ್ರು ಸೈನ್ಯವನ್ನು ಧೂಳೀಪಟ ಮಾಡಿದ. ಯುದ್ಧ ವೀರರಾದ ಮರಾಠರು ಮೈಸೂರು ಸೈನ್ಯದ ಶೌರ್ಯವನ್ನು ಅವರ ಶಸ್ತ್ರಾಸ್ತ್ರಗಳ ದಕ್ಷತೆಯನ್ನು ಮೆಚ್ಚಿಕೊಂಡು ಇದು ಶ್ರೀರಂಗ ಪಟ್ಟಣವಲ್ಲ 'ಪಿರಂಗಿಪಟ್ಟಣ'[54] ಎಂದುಕೊಂಡು ಹಿಂದಿರುಗಿದರು.

ಯುದ್ಧದಲ್ಲಿ ಅಪ್ರತಿಮನಾಗಿದ್ದಂತೆ ದೇವರಾಜಯ್ಯನು ರಾಜಕೀಯ ವ್ಯವಹಾರಗಳಲ್ಲೂ ದೂರದೃಷ್ಟಿಯುಳ್ಳವನಾಗಿದ್ದನು. ಮೈಸೂರು ರಾಜ್ಯದ ವಿಸ್ತರಣೆಗೆ ಅಡ್ಡಿಯಾಗಿದ್ದ ಅನೇಕ ಪಾಳೇಯ ಗಾರರನ್ನು ನಿರ್ಮೂಲನ ಮಾಡಿದನು. 1728ರಲ್ಲಿ ಮಾಗಡಿಯಲ್ಲಿದ್ದ ಗೌಡರ ಆಳ್ವಿಕೆಯನ್ನು ಕೊನೆ ಗೊಳಿಸಿ ಅವರ ರಾಜಧಾನಿಯಲ್ಲಿದ್ದ ಅಪಾರ ಸಂಪತ್ತು ಮತ್ತು ಆ ರಾಜ್ಯವನ್ನು ವಶಪಡಿಸಿ ಕೊಂಡನು. ಮಾಗಡಿಯ ದೊರೆ ಮುಮ್ಮಡಿ ಕೆಂಚವೀರಪ್ಪನನ್ನು ಬಂಧಿಸಿ ಸೆರೆಯಲ್ಲಿಟ್ಟನು. ಇದಾದ ನಂತರ ಪೂರ್ವದಲ್ಲಿ ರತ್ನಗಿರಿ, ಸೇಲಂ ವರೆಗಿನ ಅನೇಕ ಪಾಳೇಗಾರರನ್ನು ಸೋಲಿಸಿ ಅವರಿಂದಲೂ ಸಾಕಷ್ಟು ಸಂಪತ್ತನ್ನು ಸಂಗ್ರಹಿಸಿ ಕೃಶವಾಗಿದ್ದ ಶ್ರೀರಂಗಪಟ್ಟಣದ ಭಂಡಾರವನ್ನು ತುಂಬಿದರು.

ದೇವರಾಜಯ್ಯನು ದಿನೇದಿನೇ ಪ್ರಬಲವಾಗುತ್ತಿದ್ದುದನ್ನು ಗಮನಿಸಿ ದೊರೆ ಚಾಮರಾಜ ಒಡೆಯರ್ ಅವನನ್ನೂ, ಸರ್ವಾಧಿಕಾರಿ ನಂಜರಾಜಯ್ಯನನ್ನು ವಜಾ ಮಾಡಿ ಬೇರೆ ಅಧಿಕಾರಿಗಳನ್ನು ನೇಮಿಸಿಕೊಂಡಿದ್ದನ್ನು ಶ್ರೀರಂಗಪಟ್ಟಣದ ರಾಜಕೀಯದಲ್ಲಿ ಬಹು ಪ್ರಬಲನಾಗಿದ್ದ ದೇವರಾಜಯ್ಯನನ್ನು ಅಧಿಕಾರದಿಂದ ಕೆಳಗಿಳಿಸುವುದು ಅಷ್ಟು ಸುಲಭವಾಗಿರಲಿಲ್ಲ. ದೇವರಾಜಯ್ಯ ತನ್ನದೇ ಆದ ಸೈನ್ಯವನ್ನು ಸಜ್ಜುಗೊಳಿಸಿಕೊಂಡು ಬಂದು ಅರಮನೆಯನ್ನು ಮುತ್ತಿದನು. ರಾಜ ಮತ್ತು ಅವನ ಮೂವರು ರಾಣಿಯರನ್ನು ಅವನು ನೇಮಿಸಿದ ಅಧಿಕಾರಿಯನ್ನು ಬಂಧಿಸಿ ಸೆರೆಮನೆಯಲ್ಲಿಟ್ಟನು. ಶ್ರೀರಂಗಪಟ್ಟಣದ ಮುಂದಿನ ದೊರೆ ಇಮ್ಮಡಿ ಕೃಷ್ಣರಾಜ ಒಡೆಯರ್ ಚಿಕ್ಕವನಾಗಿದ್ದರಿಂದ ದೇವರಾಜಯ್ಯನೇ ಅಧಿಕಾರ ಸೂತ್ರಗಳನ್ನು ತನ್ನ ಕೈಗೆ ತೆಗೆದುಕೊಂಡನು. ಇದೇ ಸಮಯದಲ್ಲಿ ಸರ್ವಾಧಿಕಾರಿ ನಂಜರಾಜಯ್ಯನು ಮರಣ ಹೊಂದಿದ ನಂತರ ದೇವರಾಜಯ್ಯ ತನ್ನ ತಮ್ಮನಾದ ಕಾರಾಚೂರಿ ನಂಜರಾಜಯ್ಯನನ್ನು ಸರ್ವಾಧಿಕಾರಿಯಾಗಿ ನೇಮಿಸಿಕೊಂಡನು. ಈ ರೀತಿ ಶ್ರೀರಂಗ ಪಟ್ಟಣದ ಆಡಳಿತ ಸಂಪೂರ್ಣವಾಗಿ ದೇವರಾಜಯ್ಯ, ನಂಜರಾಜಯ್ಯ ಸಹೋದರರ ಕೈ ಸೇರಿತು.

ಶ್ರೀರಂಗಪಟ್ಟಣದ ವ್ಯವಹಾರಗಳನ್ನು ತನಗೆ ಅನುಕೂಲವಾಗಿರುವಂತೆ ವ್ಯವಸ್ಥೆಗೊಳಿಸಿ ದೇವ ರಾಜಯ್ಯನು ಪಶ್ಚಿಮಾಭಿಮುಖವಾಗಿ ಮತ್ತೆ ದಾಳಿಗಳನ್ನು ಕೈಗೊಂಡನು. ಶ್ರೀರಂಗಪಟ್ಟಣ ಸೈನ್ಯವು ಮಲಬಾರಿನ ಜಾಮಾರಿನ್ನನ ರಾಜ್ಯದ ಮೇಲೆ ದಾಳಿ ಕೈಗೊಂಡು ಪೆನಾರ್ ನದಿಯವರೆಗೂ ಮುಂದು ವರಿಯಿತು. ಆದರೆ ಮೊಗಲರು ಈ ಸಮಯದಲ್ಲಿ ದಕ್ಷಿಣದಲ್ಲಿ ತಮ್ಮ ಆಳ್ವಿಕೆಯನ್ನು ವಿಸ್ತರಿಸಲು ತೀವ್ರ ಪ್ರಯತ್ನವನ್ನು ನಡೆಸುತ್ತಿದ್ದರು. ಮೊಘಲ್ ಸಾಮ್ರಾಜ್ಯದ ಪ್ರತಿನಿಧಿ ಆರ್ಕಾಟಿನ ನವಾಬ ಅಲಿ ದೋಸ್ತ್‌ಖಾನ್ ಶ್ರೀರಂಗಪಟ್ಟಣದ ಸಂಪತ್ತನ್ನು ದೋಚಲು 1735ರಲ್ಲಿ ದಾಳಿ ನಡೆಸಿದ. ಹಲವಾರು ಪ್ರಸಿದ್ಧ ದಳಪತಿಗಳ ನೇತೃತ್ವದಲ್ಲಿ ಮುನ್ನುಗ್ಗಿ ಬಲವಾದ ಸೈನ್ಯವನ್ನು ಚನ್ನಪಟ್ಟಣದ ಕೈಲಾಚದ ಬಳಿ ಸೋಲಿಸಿದ ಮುರಾದ್‌ಖಾನ್, ಖಾಸಂಖಾನ್, ಸಿಕಂದರ್‌ಖಾನ್, ಬಹದೂರ್‌ಖಾನ್ ಮೊದಲಾದ ಸೇನಾನಿಗಳು ದೇವರಾಜಯ್ಯನಿಂದ ಹತರಾದರು. ಇಂತಹ ಬಲಿಷ್ಟ ಶತ್ರು ಸೈನ್ಯವನ್ನು ಸೋಲಿಸಿ ದೇವರಾಜಯ್ಯನು ಶ್ರೀರಂಗಪಟ್ಟಣದ ಶ್ರೇಷ್ಟತೆಯನ್ನು ಪ್ರದರ್ಶಿಸಿದ.[55] ಇದೇ ಸಮಯದಲ್ಲಿ ಮೊಘಲ್ ಮರಾಠಿ ಜಗಳದಲ್ಲಿ ಶ್ರೀರಂಗಪಟ್ಟಣ ಸೆಳೆಯಲ್ಪಟ್ಟಿತು. ದೂರದೃಷ್ಟಿ ಹೊಂದಿದ ದೇವರಾಜಯ್ಯ ಮರಾಠರ ನೆರವಿನಿಂದ ಅರ್ಕಾಟಿನ ಚಂದಾ ಸಾಹೇಬನನ್ನು ಸೋಲಿಸಿ ತಿರುಚನಾಪಳ್ಳಿಯಲ್ಲಿ ಮಧುರೆ ನಾಯಕರ ಆಳ್ವಿಕೆಗೆ ಅನುವು ಮಾಡಿಕೊಡುವುದು ಅಗತ್ಯವೆಂದು ಭಾವಿಸಿದ್ದನು. ದಕ್ಷಿಣ ಭಾರತದ ಆಯಾಕಟ್ಟಿನ ಸ್ಥಳವದ ತಿರುಚನಾಪಳ್ಳಿಯನ್ನು ಅಂತಿಮವಾಗಿ ಮೈಸೂರು ರಾಜ್ಯದಲ್ಲಿ ವಿಲೀನ ಗೊಳಿಸುವುದು ದಳವಾಯಿಯ ಗುರಿಯಾಗಿದ್ದಿತು.[56] ಅಪ್ರತಿಮ ವೀರನಾಗದಿದ ದೇವರಾಜಯ್ಯ ಶ್ರೀರಂಗಪಟ್ಟಣದ ಮೇಲೆ ದಂಡೆತ್ತಿ ಬಂದಾಗ ಅದನ್ನು ತಡೆಯಲು ಶಕ್ತನಾಗಿರಲಿಲ್ಲ. ನಾಸಿರ್‌ಜಂಗ್ ಶ್ರೀರಂಗಪಟ್ಟಣವನ್ನು ಮುತ್ತಿದಾಗ 22 ಲಕ್ಷ ಹಣವನ್ನು ಕೊಡಲು ಒಪ್ಪಿ ಒಪ್ಪಂದ ಮಾಡಿಕೊಳ್ಳ ಬೇಕಾಯಿತು. 18ನೇ ಶತಮಾನದ ಮಧ್ಯಭಾಗದಲ್ಲಿ ತನ್ನ ತಮ್ಮ ನಂಜರಾಜಯ್ಯನಿಗೆ ದಳವಾಯಿ ತನವನ್ನು ವಹಿಸಿಕೊಟ್ಟು 1757ರಲ್ಲಿ ಸತ್ಯಮಂಗಲಕ್ಕೆ ಹೋಗಿ ನೆಲಸಿದ. ನಂತರ ದೀರ್ಘಕಾಲ ತನ್ನ ರಾಜ್ಯಕ್ಕೆ ಶ್ರಮಿಸಿದ ದೇವರಾಜಯ್ಯ 1758ರಲ್ಲಿ ಮರಣ ಹೊಂದಿದನು.

ಸರ್ವಾಧಿಕಾರಿಯಾಗಿ ಶ್ರೀರಂಗಪಟ್ಟಣದ ರಾಜಕೀಯವನ್ನು ನಿಯಂತ್ರಿಸಿದ ಕರಾಚೂರಿ ನಂಜರಾಜಯ್ಯ ಸಮರ್ಥ ಸೇನಾನಿ ಹಾಗೂ ದಕ್ಷ ಆಡಳಿತಗಾರ. ದಕ್ಷಿಣ ಭಾರತದ ಪ್ರಮುಖ ರಾಜ್ಯ ಗಳಲ್ಲಿ ತೀವ್ರ ಸೆಣೆಸಾಟ ಕಾಣಿಸಿಕೊಂಡು ವಿದೇಶಿಯರ ಮಧ್ಯ ಪ್ರವೇಶದಿಂದ ಪರಿಸ್ಥಿತಿ ಮತ್ತಷ್ಟು ಪ್ರಕ್ಷುಬ್ಧವಾಗಿದ್ದ ಸಮಯದಲ್ಲಿ ನಂಜರಾಜಯ್ಯ ಶ್ರೀರಂಗಪಟ್ಟಣದ ಆಡಳಿತ ಸೂತ್ರಗಳನ್ನು ಹಿಡಿದು ಅದರ ನೀತಿಯನ್ನು ರೂಪಿಸಿದ ಶಿಲ್ಪಿಯಾಗಿದ್ದನು. ತನ್ನ ಅಣ್ಣ ದಳವಾಯಿ ದೇವರಾಜಯ್ಯನ

ವ್ಯವಹಾರಗಳನ್ನು ಗಮನಿಸುತ್ತಾ, ಅವನಿಗೆ ನೆರವಾಗುತ್ತಾ ಬಂದಿದ್ದ ನಂಜರಾಜಯ್ಯ, ದೊಡ್ಡ ಬಳ್ಳಾಪುರದ ರಂಗೇಗೌಡನು ಮರಾಠ ಮತ್ತು ಮೊಘಲ್ ಸೈನ್ಯದ ಸಹಾಯದಿಂದ ದೇವನಳ್ಳಿಯನ್ನು ವಶಪಡಿಸಿಕೊಂಡಾಗ ಅವನನ್ನು ಸಂಪೂರ್ಣವಾಗಿ ಸೋಲಿಸಿ ದೇವನಹಳ್ಳಿಯನ್ನು ವಶಪಡಿಸಿ ಕೊಂಡನು.[57]

ದಕ್ಷಿಣ ಭಾರತದಲ್ಲಿ ಎಲ್ಲೆಲ್ಲೂ ಅಭದ್ರತೆ, ರಾಜಕೀಯ ಅವ್ಯವಸ್ಥೆಯು ಸಾಮಾನ್ಯವಾಗಿದ್ದಿತು. ಹೈದರಾದಿನ ಸಲಾಬತ್‌ಜಂಗ್ ದಕ್ಷಿಣದ ಅನೇಕ ರಾಜ್ಯಗಳನ್ನು ಕೊಳ್ಳೆ ಹೊಡೆಯುತ್ತಾ ಬಂದು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿ ಆ ರಾಜ್ಯಕ್ಕೆ 56 ಲಕ್ಷಗಳ ಪೊಗದಿಯನ್ನು ಹಾಕಿದನು. ಇದೇ ಸಮಯದಲ್ಲಿಯೇ ಆರ್ಕಾಟಿನಲ್ಲೂ ಉತ್ತರಾಧಿಕಾರಿಯ ವಿವಾದವು ಪ್ರಾರಂಭವಾಗಿದ್ದು, ಮಹಮ್ಮದ್ ಆಲಿಯು ನಂಜರಾಜಯ್ಯನ ಸಹಾಯವನ್ನು ಯಾಚಿಸಿದನು. ನಂಜರಾಜಯ್ಯನು 20,000 ಸೈನಿಕ ರೊಂದಿಗೆ ಮಹಮ್ಮದ್ ಆಲಿಯ ನೆರವಿಗೆ ಹೋದನು. ತಿರುಚನಾಪಳ್ಳಿಯ ಮೇಲೆ ಅವನು ನಡೆಸಿದ ದಾಳಿ ಯಶಸ್ವಿಯಾಗಲಿಲ್ಲ. ಇದರಿಂದ ಶ್ರೀರಂಗಪಟ್ಟಣದ ಬೊಕ್ಕಸಕ್ಕೆ 3–4 ಕೋಟಿ ರೂಪಾಯಿಗಳು ನಷ್ಟವಾಯಿತು. ರಾಜ್ಯದ ಆರ್ಥಿಕ ಸ್ಥಿತಿ ಉಲ್ಬಣಿಸಿತು. ಮರಾಠರಿಗೂ ಸಲಾಬತ್‌ಜಂಗನಿಗೂ ಒಪ್ಪಂದ ದಂತೆ ಕೊಡಬೇಕಾಗಿದ್ದ ಹಣವನ್ನು ಕೊಡಲಾಗಲಿಲ್ಲ. ನಂಜರಾಜಯ್ಯನು ತಿರುಚನಾಪಳ್ಳಿಯನ್ನು ಮಹಮ್ಮದ್ ಆಲಿ ಮತ್ತು ಇಂಗ್ಲೀಷರಿಂದ ವಶಪಡಿಸಿಕೊಳ್ಳಲು ಪದೇಪದೇ ಪ್ರಯತ್ನಿಸಿ ಸೋತನು. ಮಹಮ್ಮದ್ ಆಲಿಯ ದ್ರೋಹವು ಬಯಲಾಗುವ ವೇಳೆಗೆ ಕಾಲ ಮಿಂಚಿತು. ಈ ಸಮಯದಲ್ಲಿ ಹೈದರಾಲಿಯು ಬ್ರಿಟಿಷರ ವಂಚನೆಯ ಬಗ್ಗೆ ನಂಜರಾಜಯ್ಯನಿಗೆ ಹಿತನುಡಿಯನ್ನು ನೀಡಿದ್ದನು.

ಇದರಿಂದ ತಿರುಚನಾಪಳ್ಳಿಯಲ್ಲಿ ಇಂಗ್ಲಿಷರ ಕುತ್ಸಿತ ಮನೋಭಾವವನ್ನು ಕಂಡ ನಂಜರಾಜಯ್ಯನು ಅವರಿಗೆ ವಿರುದ್ಧವಾಗಿ ಹೈದರ್ ಆಲಿಯನ್ನು ದಿಂಡಿಗಲ್ಲಿನ ಫೌಜುದಾರನಾಗಿ ನೇಮಿಸಿದ. ಇದು ರಾಜನೀತಿ ಚತುರನಾಗಿದ್ದ ಹೈದರನ ಪ್ರಾಬಲ್ಯಕ್ಕೆ ಅಡಿಗಲ್ಲಾಯಿತು.[58] ನಂಜರಾಜಯ್ಯನ ಸೋಲು ಅವನ ದುಸ್ಥಿತಿ ಮೈಸೂರಿನ ಅಭದ್ರ ಸ್ಥಿತಿಯ ಪ್ರಯೋಜನವನ್ನು ಪಡೆದು ಕೊಂಡು ಮೈಸೂರಿನ ದೊರೆ ತನ್ನ ಪೂರ್ಣ ಅಧಿಕಾರವನ್ನು ಸ್ಥಾಪಿಸಲು ಪ್ರಯತ್ನಿಸಿದನು. ಈ ಸಮಯದಲ್ಲಿ ದೊರೆ ಕೃಷ್ಣರಾಜ ಒಡೆಯರ್ ತನ್ನ ಸ್ವಾತಂತ್ರ್ಯವನ್ನು ಪಡೆದುಕೊಳ್ಳಲು ಖಂಡೇರಾವ್ ಮೊದಲಾದವರ ಸಹಾಯದಿಂದ ಯತ್ನಿಸಿದನು. ನಂಜರಾಜಯ್ಯನು ರಾಜನ ಪ್ರಯತ್ನಗಳನ್ನು ಅರಿತು ಕೊಂಡು ರಾಜರ ಮೇಲೆ ದಾಳಿ ಮಾಡಿದನು.

ದಕ್ಷಿಣ ಭಾರತದ ರಾಜಕೀಯ ಸ್ಥಿತಿ ದಿನದಿನವು ಹದಗೆಡುತ್ತಾ ಬಂದಿದ್ದಿತು. ಶ್ರೀರಂಗ ಪಟ್ಟಣದ ದುರ್ಬಲ ಸ್ಥಿತಿಯನ್ನು ಅರಿತ ಸಲಾಬತ್‌ಜಂಗ್, ಫ್ರೆಂಚ್ ಸೈನ್ಯದ ಸಹಾಯದಿಂದ ಶ್ರೀರಂಗ ಪಟ್ಟಣದ ಮೇಲೆ ದಾಳಿ ಮಾಡಿದನು. ಇದರಿಂದ ನಂಜರಾಜಯ್ಯನು ಪರಿಸ್ಥಿತಿಯನ್ನು ಎದುರಿಸಲು ಪ್ರಯತ್ನಿಸಿದ. ರಾಜ್ಯದ ಆರ್ಥಿಕ ಸ್ಥಿತಿ ತೀರ ಹದಗೆಟ್ಟಿತು. ಸೈನಿಕರಿಗೆ ಸಂಬಳದಲ್ಲಿ ಕೊರತೆ ಉಂಟಾಯಿತು. ಸವಲ್ಪ ಸಮಯದ ನಂತರ ಮೈಸೂರಿನ ರಾಜ್ಯದ ಸ್ಥಿತಿ ಸ್ವಲ್ಪ ಸುಧಾರಿಸಿದಂತೆ ಕಂಡುಬಂದಾಗ 1755ರಲ್ಲಿ ಮರಾಠ ಸೈನ್ಯವು ಶ್ರೀರಂಗಪಟ್ಟಣವನ್ನು ಮುತ್ತಿತು. ಪೇಶ್ವೆ ಬಾಜೀರಾಯನ ಬೃಹತ್ ಸೈನ್ಯವನ್ನು ಹಿಮ್ಮೆಟ್ಟಿಸುವ ಸಾಮರ್ಥ್ಯವನ್ನು ನಂಜರಾಜಯ್ಯನು ಕಳೆದು ಕೊಂಡಿದ್ದ. ಮರಾಠರಿಗೆ 32 ಲಕ್ಷ ರೂಪಾಯಿಗಳನ್ನು ಕೊಡಲು ಒಪ್ಪಿ ಸಂಧಿ ಮಾಡಿಕೊಂಡಿದ್ದ 6 ಲಕ್ಷ ನಗದು ಹಣ, ಉಳಿದ ಹಣಕ್ಕೆ ಜಾಮೀನಾಗಿ 13 ತಾಲ್ಲೂಕುಗಳನ್ನು ವಹಿಸಿಕೊಟ್ಟನು. ಈ ಹೊತ್ತಿಗೆ ಮೈಸೂರು ರಾಜ್ಯವು ಪೂರ್ಣವಾಗಿ ದಿವಾಳಿ ಹಂತಕ್ಕೆ ತಲುಪಿತು. ಸೈನಿಕರು ಧರಣಿಯಲ್ಲಿ ನಿರತರಾದರು. ಹೈದರಾಲಿ ರಾಜ್ಯದ ಆಸ್ತಿಪಾಸ್ತಿಗಳನ್ನು ಮಾರಿ ಕೆಲವು ಕ್ರಮಗಳನ್ನು ಕೈಗೊಂಡು ಸೈನಿಕರಿಗೆ ಸಂಬಳವನ್ನು ನೀಡಿದ. ಈ ಪರಿಸ್ಥಿತಿಯಲ್ಲಿ ಹೈದರಾಲಿಯು ಮೈಸೂರು ರಾಜ್ಯದಲ್ಲಿ ಮತ್ತಷ್ಟು ಬಲಿಯಲು ಸಹಾಯವಾಯಿತು. ಈ ಸಂದರ್ಭದಲ್ಲಿ ಕಾಯುತ್ತಿದ್ದ ದೊರೆ ಕೃಷ್ಣರಾಜ ಒಡೆಯರ್ ನಂಜರಾಜಯ್ಯನ ಜೊತೆ ಸಂಬಂಧವನ್ನು ಕಡಿದುಹಾಕುವಂತೆ ಹೈದರನ ಮೇಲೆ ಒತ್ತಡ ತಂದನು. 1759ರಲ್ಲಿ ನಡೆದ ಮರಾಠ ದಾಳಿಯನ್ನು ಧೈರ್ಯವಾಗಿ ಎದುರಿಸಿ ಮೈಸೂರಿಗೆ ಅನುಕೂಲಕರವಾಗಿ ಒಪ್ಪಂದ ಮಾಡಿಕೊಂಡ. ಈ ಹೊತ್ತಿಗೆ ಅಧಿಕಾರದ ಔನ್ನತ್ಯಕ್ಕೆ ಏರಿದ್ದ ಹೈದರನು ಖಂಡೇರಾವ್, ಮಹಾರಾಜ ಮತ್ತು ದೇವರಾಜಮ್ಮಣ್ಣಿ ಇವರ ಸಹಕಾರದಿಂದ ಒಳಸಂಚು ಮಾಡಿ ನಂಜರಾಜಯ್ಯನನ್ನು ಕುಗ್ಗಿಸಿದ. ನಂಜರಾಜಯ್ಯನು ಅಧಿಕಾರಕ್ಕೆ ರಾಜೀನಾಮೆ ಕೊಟ್ಟು ಹೈದರ್ ಇವನಿಗೆ ಒದಗಿಸಿದ ಕೊಣನೂರಿನ ಜಹಗೀರಿನಲ್ಲಿ 1773ರಲ್ಲಿ ಕೊನೆಯುಸಿರೆಳೆದನು.

ಹೀಗೆ ಶ್ರೀರಂಗಪಟ್ಟಣದ ಇತಿಹಾಸದಲ್ಲಿ ದೇವರಾಜಯ್ಯ ಮತ್ತು ನಂಜರಾಜಯ್ಯನವರ ಅಧಿಕಾರ ಕೊನೆಗೊಂಡು ಹೈದರನ ಆಗಮನದೊಂದಿಗೆ ಮೈಸೂರಿನಲ್ಲಿ ದಳವಾಯಿತನವೂ ಸರ್ವಾಧಿಕಾರತನವೂ ಹೈದರನ ಕೈ ಸೇರುವಂತಾಯಿತು.

## ಹೈದರ್ ಆಲಿ ಮತ್ತು ಟಿಪ್ಪುಸುಲ್ತಾನರ ಸಾಧನೆಗಳು

ಅಧಿಕಾರ ಚಾಲನೆಗೆ ಶಕ್ತಿ ಮತ್ತು ಯುಕ್ತಿಯೇ ಮೂಲವಾಗಿರುವ ದೇಶದಲ್ಲಿ ಸಾಮ್ರಾಜ್ಯ ಸ್ಥಾಪನೆ ಮಾಡುವುದು ಸುಲಭ. ಅದರಲ್ಲೂ ಸಮರ್ಥ ಸೇನಾನಿಯಾದವನಿಗೆ ರಾಜ್ಯದ ಪ್ರಭು

ವಾಗುವುದು ದುಸ್ಸಾಧ್ಯವಾದುದೇನು ಆಗಲಾರದು. ಈ ನಿಟ್ಟನಲ್ಲಿ ಉಪಾಯಗಾರ, ಸಾಹಸಿ, ಶೂರ ನೆಂದೇ ಹೆಸರಾದ ಹೈದರಾಲಿಯ ಪ್ರವೇಶ ಮೈಸೂರು ಸಂಸ್ಥಾನದಲ್ಲಿ ಒಂದು ಮೈಲುಗಲ್ಲು ಎಂದು ಹೇಳಬಹುದು.

ಸರ್ವಾಧಿಕಾರಿಯಾದೊಡನೆ ಹೈದರನ ಗಮನವು ಮೈಸೂರು ಸಂಸ್ಥಾನದ ಎಲ್ಲೆಗಳನ್ನು ವಿಸ್ತರಿಸುವತ್ತ ಹರಿಯಿತು. 1761ರಲ್ಲಿ ನಿಜಾಮನ ಚಿಕ್ಕ ತಮ್ಮ ಬಸಲತ್‌ಜಂಗನು ಸಿರಾವನ್ನು ಮುತ್ತಿದಾಗ ಹೈದರನು ಅವನನ್ನು ಸೋಲಿಸಿ ಅವನಿಂದ ತಾನು ಸಿರಾದ ನವಾಬನೆಂದು ಕರೆಸಿಕೊಂಡು ಸನ್ನದನ್ನು ಪಡೆದ. ಅದೇ ಯುದ್ಧದಲ್ಲಿ ಅವನು ಹೊಸಕೋಟೆ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ಪೆನುಗೊಂಡ, ನಂದಿದುರ್ಗ, ರಾಯದುರ್ಗ ಮತ್ತು ಹರಪನಹಳ್ಳಿಗಳನ್ನು ಹತ್ತಿಕ್ಕಿದ.[59] ಅನಂತರ ಚಿತ್ರದುರ್ಗ ಕೋಟೆಯನ್ನು ವಶಪಡಿಸಿಕೊಳ್ಳುವಲ್ಲಿ ಅವನಿಗೆ ತೊಂದರೆಗಳು ಎದುರಾದವು. ಆದರೂ ಆ ಕೋಟೆ ಅವನ ಸ್ವಾಧೀನವಾಯಿತು.[60] ಹೈದರನ ದೊಡ್ಡ ವಿಜಯವೆಂದರೆ 1763ರಲ್ಲಿ ಬದನೂರನ್ನು ಆಕ್ರಮಿಸಿ ಅಲ್ಲಿನ ರಾಣಿ ವೀರಮ್ಮಾಜಿಯನ್ನು ಸೋಲಿಸಿ ಅಪಾರ ಸಂಪತ್ತನ್ನು ಸೂರೆಗೈದನು.[61] ಬಸವರಾಜದುರ್ಗ, ಹೊನ್ನಾವರ, ಮಂಗಳೂರು, ಬಲ್ಲಾಳ ರಾಯನ ದುರ್ಗ, ಮೊದಲಾದ ಕರಾವಳಿ ಪ್ರದೇಶಗಳನ್ನು ತನ್ನ ವಶಕ್ಕೆ ತೆಗೆದುಕೊಂಡನು. ಇದರಿಂದ ಮೈಸೂರು ಸಂಸ್ಥಾನದ ಮೇರೆಯು ಉತ್ತರದಲ್ಲಿ ಹೊನ್ನಾವರದಿಂದ ದಕ್ಷಿಣಕ್ಕೆ ಮಂಗಳೂರಿನವರೆಗೂ ಹಬ್ಬಿತು.

ದಿನೇ ದಿನೇ ಪ್ರಬಲವಾಗುತ್ತಿದ್ದ ಹೈದರನನ್ನು ಹಾಗೂ ಅವನ ಸಾಮ್ರಾಜ್ಯ ವಿಸ್ತರಣೆಯನ್ನು ಕಂಡು ಮರಾಠರು ಸಹಿಸದಾದರು. ಮೂರನೆಯ ಪಾಣಿಪಟ್ ಯುದ್ಧಾನಂತರ, ಮರಾಠರ ಮಾಧವ ರಾಯನ ನಾಯಕತ್ವದಲ್ಲಿ ತಮ್ಮ ಸಾಮ್ರಾಜ್ಯ ವಿಸ್ತರಣಾಕಾಂಕ್ಷೆಯ ದೃಷ್ಟಿಯನ್ನು ಉತ್ತರದಿಂದ ದಕ್ಷಿಣ ಭಾರತದತ್ತ ಹರಿಸಿದರು. 1764 ರಲ್ಲಿ ಮಾಧವರಾಯನು ಮೈಸೂರನ್ನು ಮುತ್ತಿದಾಗ, ಹೈದರನು ಅವನಿಗೆ 28 ಲಕ್ಷ ರೂಪಾಯಿಗಳನ್ನು ತನ್ನ ಗಡಿನಾಡಿನಲ್ಲಿದ್ದ ಗುತ್ತಿ ಮತ್ತು ಸವಣೂರು ಕೋಟೆ ಗಳನ್ನು ಬಿಟ್ಟುಕೊಡಬೇಕಾಯಿತು.[62] ಅನಂತರ ಹೈದರನು ಮಲಬಾರು ಪ್ರದೇಶಗಳನ್ನು ಆಕ್ರಮಿಸುವ ಕಾರ್ಯದಲ್ಲಿ ತೊಡಗಿದನು. ಕೊಳತ್ತಿರಿ ರಾಜನು ಸಹಾಯಕ್ಕಾಗಿ ಅವನನ್ನು ಪ್ರಾರ್ಥಿಸಿಕೊಂಡಿದ್ದರಿಂದ ಹೈದರನು 1766 ರಂದು 40,000 ಪಡೆಯೊಡನೆ ದಂಡೆತ್ತಿ ಹೋಗಿ ಮಲಬಾರನ್ನು ಮುತ್ತಿ, ಮಲ ಬಾರಿನಿಂದ ಕೊಚ್ಚಿನ್‌ವರೆಗಿನ ಸಂಪೂರ್ಣ ಪ್ರದೇಶವನ್ನು ವಶಪಡಿಸಿಕೊಂಡನು.[63] ತಿರುವಾಂಕೂರಿನ

ರಾಜನನ್ನು ಸದೆ ಬಡಿಯಬೇಕೆಂಬ ಪ್ರಯತ್ನದಲ್ಲಿರುವಾಗಲೇ ಇಂಗ್ಲೀಷರು, ಮರಾಠರು ಮತ್ತು ನಿಜಾಮನು ತನ್ನ ವಿರುದ್ಧ ಮಸಲತ್ತು ನಡೆಸುತ್ತಿರುವರೆಂಬ ಸುದ್ದಿ ಅವನ ಕಿವಿಗೆ ಬಿತ್ತು. ತನ್ನ ಮುಂದಿನ ಆಕ್ರಮಣ ಕಾರ್ಯವನ್ನು ಬದಿಗೊತ್ತಿ ಅವನು ಶ್ರೀರಂಗಪಟ್ಟಣಕ್ಕೆ ಹಿಂದುರಿಗಿದನು.

1766ರಲ್ಲಿ ಹೈದರ್ ಆ ಮೂರು ಬಣಗಳ ವಿರುದ್ಧ ಯುದ್ಧವನ್ನು ಸಾರಿದ. ಈ ಯುದ್ಧವೇ ಇತಿಹಾಸ ಪ್ರಸಿದ್ಧವಾದ ಮೊದಲನೇ ಮೈಸೂರು ಯುದ್ಧ. ಕ್ಲೈವನು ಮೊಗಲ್ ಚಕ್ರವರ್ತಿ ಷಾ ಆಲಂನಿಂದ ಪೂರ್ವ ತೀರದಲ್ಲಿದ್ದ (ನಿಜಾಮನಿಗೆ ಸೇರಿದ) ಐದು ಜಿಲ್ಲೆಗಳನ್ನು ಪಡೆದುಕೊಂಡಿದ್ದು ನಿಜಾಮನನ್ನು ರೇಗಿಸಿತು; ಇಂಗ್ಲೀಷರ ವಿರುದ್ಧ ಯುದ್ಧ ಸಾರುವಂತೆ ಪ್ರೇರೇಪಿಸಿತು. ನಿಜಾಮನು ತನ್ನ ಸಾಧನೆಗಾಗಿ ಹೈದರ್ ಮತ್ತು ಮರಾಠರ ಸಹಾಯವನ್ನು ಅಪೇಕ್ಷಿಸಿದ. ಏಕೆಂದರೆ ಇಂಗ್ಲೀಷರನ್ನು ವಿರೋಧಿಸುವಷ್ಟು ಬಲ ಅವನಲ್ಲಿರಲಿಲ್ಲ. ನಾಟಕೀಯವಾದ ಮಾತುಕತೆಗಳು ಈ ಮೂರು ಗುಂಪು ಗಳಲ್ಲಿ ನಡೆದವು. ಆದರೆ ಫಲಿತಾಂಶ ಮಾತ್ರ ಅನುಮಾನಾಸ್ಪದದಿಂದ ಕೂಡಿದ್ದಿತು.

ಇಂಗ್ಲೀಷರು ಈ ಸಂಧಾನದ ಫಲವನ್ನು ಜಾಣ್ಮೆಯಿಂದ ತಮ್ಮ ಲಾಭಕ್ಕೆ ಉಪಯೋಗಿಸಿ ಕೊಂಡರು. ತಮ್ಮ ಚತುರ ರಾಯಭಾರತನದಿಂದ ನಿಜಾಮನನ್ನು ತಮ್ಮ ಕಡೆಗೆ ಒಲಿಸಿಕೊಂಡು ಒಪ್ಪಂದವನ್ನು ಸಹ ಮಾಡಿಕೊಂಡರು. ಆ ಒಪ್ಪಂದದ ಪ್ರಕಾರ ಇಂಗ್ಲೀಷರು ನಿಜಾಮನಿಗೆ ಮೈಸೂರನ್ನು ಗೆದ್ದುಕೊಡುವುದೆಂದೂ, ಅದಕ್ಕೆ ಪ್ರತಿಫಲವಾಗಿ ಅವನು ಉತ್ತರದ ಭಾಗಗಳನ್ನು ತಮಗೆ ಬಿಟ್ಟುಕೊಡಬೇಕೆಂತಲೂ ತೀರ್ಮಾನವಾಯಿತು. ಮರಾಠರು ಈ ಒಪ್ಪಂದದಲ್ಲಿ ಭಾಗಿಗಳಾದರು. ಇದರಿಂದ ಹೈದರನಿಗೆ ಆಶ್ಚರ್ಯವೆನಿಸಿತು. ಅನಂತರ ಮುಂದಿನ ಘಟನೆಗಳು ತೀವ್ರವಾಗಿ ನಡೆದುದಲ್ಲವೆ, ಶತ್ರುಗಳು ಅವನನ್ನು ಮುತ್ತಿದರು. ಮರಾಠರು ಅವನ ಸೀಮೆಯ ಉತ್ತರ ದಿಕ್ಕಿನ ಭಾಗಗಳನ್ನು ಹಿಡಿದುಕೊಂಡರು. ಅಂಥ ಗಂಡಾಂತರದ ಪರಿಸ್ಥಿತಿಯಲ್ಲಿ ಹೈದರ್ ಎದೆಗುಂದಲಿಲ್ಲ. ಧೈರ್ಯದಿಂದ ಸೆಣಸಿದ. ಅವನು ಮರಾಠರಿಗೆ ಕೆಲವು ಲಕ್ಷ ರೂಪಾಯಿಗಳನ್ನು, ತನ್ನ ಗಡಿಯ ಕೆಲವು ಮುಖ್ಯ ಪ್ರದೇಶಗಳನ್ನು ಬಿಟ್ಟುಕೊಡುವುದರ ಮೂಲಕ ಅವರೊಡನೆ ಕಾಲು ಮಾಡಿಕೊಂಡರು. ಅವರನ್ನು ಯುದ್ಧರಂಗದಿಂದ ಹೊರಗಡೆಯಿರುವಂತೆ ಮಾಡಿದ. ಅತ್ತ ನಿಜಾಮನು ನಿಧಾನವಾಗಿ ಕಾಲ ತಳ್ಳುತ್ತಾ ಮೈಸೂರಿನವರೆಗೂ ತನ್ನ ಬಲವನ್ನು ನಡೆಸಿಕೊಂಡು ಬಂದಾಗ, ಹೈದರನು ಅವನೊಡನೆ ಸಂಧಾನ ಮಾಡಿಕೊಳ್ಳುವುದರಲ್ಲಿ ಯಶಸ್ವಿಯಾದ ಮತ್ತು ಇಂಗ್ಲೀಷರ ವಿರುದ್ಧ ಯುದ್ಧವನ್ನು ಹೂಡಲು ಸಮರ್ಥನಾದ. ಇಂಗ್ಲೀಷರ ಸಹಾಯದೊಡನೆ ಹೈದರನ ವಿರುದ್ಧ

ಹೋರಾಡಲು ಬಂದ ನಿಜಾಮನು, ಹೈದರನ ಸಹಾಯದೊಡನೆ ಈಗ ಇಂಗ್ಲೀಷರ ವಿರುದ್ಧ ಕತ್ತಿ ಮಸೆಯತೊಡಗಿದ. ಹೈದರ್ ಹೀಗೆ ತನ್ನ ಚಾಣಾಕ್ಷತನದಿಂದ ಈ ಶತ್ರುಕೂಟವನ್ನು ಭೇದಿಸುವಲ್ಲಿ ಕೊನೆಗೆ ಯಶಸ್ವಿಯಾದನು.[64]

ಹೈದರ್ ಮತ್ತು ನಿಜಾಮರೀರ್ವರೂ ಇಂಗ್ಲೀಷರ ಅಧೀನದಲ್ಲಿದ್ದ ಪ್ರದೇಶಗಳನ್ನು ಆಕ್ರಮಿಸಿ ಕೊಳ್ಳಲು ತೀರ್ಮಾನಿಸಿಕೊಂಡರು. ಯುದ್ಧ ಪ್ರಾರಂಭವಾದಾಗ ಅವರಿಗೆ ತಕ್ಕ ಸಹಾಯ ಸ್ವಜನ ರಿಂದಲೇ ಸಿಕ್ಕಲಿಲ್ಲ. ಪರಿಣಾಮವಾಗಿ ಅವರು ಚಂಗಾಮ, ತಿರುವಣ್ಣಾಮಲೈ ಮತ್ತು ವಾಣಿಯಂಬಾದಿ ಮೊದಲಾದ ಕೆಲವು ಮುಖ್ಯಸ್ಥಳಗಳಲ್ಲಿ ನಡೆದ ಕಾಳಗಗಳಲ್ಲಿ ಸೋಲನಪ್ಪಬೇಕಾಯಿತು. ಈ ಜಯಗಳು ಇಂಗ್ಲೀಷರ ಆಕಾಂಕ್ಷೆಯನ್ನು ಹೆಚ್ಚಿಸಿ, ಇಡೀ ಮೈಸೂರನ್ನು ಗೆಲ್ಲಲು ಪ್ರೇರೇಪಿಸಿದವು.[65] ಅದರೆ ಅದಕ್ಕಾಗಿ ಅವರು ನಿಜಾಮನನ್ನು ಯುದ್ಧರಂಗದಿಂದ ಹೊರಬರುವಂತೆ ಮಾಡಬೇಕಾಗಿತ್ತು. ನಿಜಾಮನಾದರೂ ತನ್ನ ಪಡೆಗಳ ಸೋಲಿನಿಂದ ಬೇಸರಗೊಂಡಿದ್ದು, ಲಾಭ ಸಿಕ್ಕುವ ಕಡೆಗೆ ಸೇರಿ ಕೊಳ್ಳಲು ಸಿದ್ಧನಾಗಿದ್ದ. ಅವನು ಇಂಗ್ಲೀಷರೊಂದಿಗೆ ಪ್ರತ್ಯೇಕ ಒಡಂಬಡಿಕೆಯನ್ನು ಮಾಡಿಕೊಂಡು ಹೈದರಬಾದಿಗೆ ಹಿಂತಿರುಗಿದ. ಇಂಗ್ಲೀಷರು ತಮ್ಮ ಹೋರಾಟವನ್ನು ಮುಂದುವರಿಸಿ ಹೈದರನನ್ನು ಪೂರ್ವ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಎದುರಿಸಿ ಹಿಮ್ಮೆಟ್ಟುವಂತೆ ಮಾಡಿದರೂ, ಅವರಿಂದ ಹೈದರನನ್ನು ಹೆಚ್ಚು ಕಾಲ ಎದುರಿಸಲಾಗಲಿಲ್ಲ. ಏಕೆಂದರೆ ಅವರಿಗೆ ಸಾಮಗ್ರಿಗಳ ಪೂರೈಕೆಯಾಗಲಿ ಹಣಕಾಸಿನ ವ್ಯವಸ್ಥೆಯಾಗಲಿ ಸರಿಯಾಗಿ ಆಗುತ್ತಿರಲಿಲ್ಲ. ಇಂಗ್ಲೀಷರ ಈ ದೌರ್ಬಲ್ಯಗಳು ಹೈದರನಿಗೂ ಚೆನ್ನಾಗಿ ಗೊತ್ತಿತ್ತು.[66] ಆದ್ದರಿಂದ ಹೈದರನು ಈ ಅವಕಾಶವನ್ನು ಉಪಯೋಗಿಸಿ ಕೊಂಡು ತನ್ನೆಲ್ಲ ನಷ್ಟವನ್ನು ಪುನಃ ತುಂಬಿಕೊಳ್ಳಲು ಸಾಧ್ಯವಾಯಿತು. ಅವನು ತನ್ನೊಡನೆ ಹೆಚ್ಚು ಸೈನ್ಯವನ್ನು ತೆಗೆದುಕೊಂಡು ಮದರಾಸಿನ ದ್ವಾರದ ಬಳಿ ಇಂಗ್ಲೀಷರನ್ನು ಎದುರಿಸಿದ ಈ ಆಕ್ರಮಣ ಇಂಗ್ಲೀಷರ ದೃತಿಗೆಡಿಸಿತಲ್ಲದೆ ಶಾಂತಿಯ ಒಪ್ಪಂದಕ್ಕಾಗಿ ಅವರು ಮೊರೆಯಿಡ ಬೇಕಾಯಿತು. ಇದು ಭಾರತೀಯ ರಾಜನೊಬ್ಬ ಇಂಗ್ಲೀಷರ ಮೇಲೆ ಸಾಧಿಸಿದ ಮೊದಲ ವಿಜಯ ವಾಗಿತ್ತು.[67] ತಮ್ಮ ರಾಜ್ಯ ವಿಸ್ತರಣೆಯ ಕಾರ್ಯದಲ್ಲಿ ಎಂದೂ ಸೋಲನ್ನರಿಯದ ಇಂಗ್ಲೀಷರು ಪ್ರಥಮ ಬಾರಿಗೆ ಭಾರತೀಯರಿಂದ ಸೋಲನ್ನನುಭವಿಸಬೇಕಾಯಿತು. ಈ ಪ್ರಥಮ ಮೈಸೂರು ಯುದ್ಧವು ಇಂಗ್ಲೀಷರಿಗೆ ಚೇತರಿಸಿಕೊಳ್ಳಲಾಗದಂತ ಪೆಟ್ಟುಕೊಟ್ಟಿತು. ಮೈಸೂರನ್ನು ತಮ್ಮ ಸ್ವಾಧೀನ ಮಾಡಿಕೊಳ್ಳುವ ಇಂಗ್ಲೀಷರ ಕನಸು ಇದರಿಂದ ನುಚ್ಚು ನೂರಾಯಿತು.

ಮೈಸೂರು ಯುದ್ಧದಿಂದ ಹೈದರನ ಖ್ಯಾತಿಯು ಭಾರತದಲ್ಲೆಲ್ಲಾ ಹರಡಿತು. ಅವನ ಖ್ಯಾತಿಯನ್ನು ಕಂಡು ಕರುಬದ ಹಲವಾರು ಸಂಸ್ಥಾನಗಳಲ್ಲಿ ಮರಾಠರು ಮುಖ್ಯರು. ಹೈದರನನ್ನು ಸದೆಬಡಿದು ತಮ್ಮ ಬಲವನ್ನು ಸ್ಥಾಪಿಸಬೇಕೆಂದಿದ್ದ ಅವರ ಆಕಾಂಕ್ಷೆಯು ಈಡೇರಲಿಲ್ಲ. ಇದರಿಂದ ಯುದ್ಧ ಮುಗಿದ ಸ್ವಲ್ಪ ಸಮಯದಲ್ಲೇ ಮರಾಠರು ಹೈದರನ ಮೇಲೆ ಯುದ್ಧ ಸಾಗಿ ಮೈಸೂರನ್ನು ಮುತ್ತಿದರು. ಹೈದರನು ಒಪ್ಪಂದವೊಂದರ ಆಧಾರದ ಮೇಲೆ ಇಂಗ್ಲೀಷರ ಸಹಾಯವನ್ನು ಕೋರಿದ. ಆದರೆ ಅವನ ಕೋರಿಕೆಯನ್ನು ಇಂಗ್ಲೀಷರು ತಮ್ಮ ಗಮನಕ್ಕೆ ತೆಗೆದುಕೊಳ್ಳಲಿಲ್ಲ. ಆರ್ಕಾಟಿನ ನವಾಬನು ಟಿಪ್ಪುಸುಲ್ತಾನನಿಗೆ ತಿರುಚನಾಪಳ್ಳಿಯನ್ನು ಬಿಟ್ಟುಕೊಡಲು ತಿರಸ್ಕರಿಸುವವರೆಗೂ ಇಂಗ್ಲೀಷರು ಮೈಸೂರಿನ ವಿರುದ್ಧ ಮಸಲತ್ತು ನಡೆಸುತ್ತ ಬಂದರು. ಎರಡನೆಯ ಮೈಸೂರು ಯುದ್ಧಕ್ಕೆ ಅದು ಬಲವಾದ ಕಾರಣವೆನಿಸಿಕೊಂಡಿತು. ಅಲ್ಲದೆ ಈ ಯುದ್ಧಕ್ಕೆ ಹಲವಾರು ಕಾರಣಗಳು ಇದ್ದವು. 1778ರಲ್ಲಿ ಫ್ರಾನ್ಸ್ ಮತ್ತು ಇಂಗ್ಲೆಂಡಿನ ನಡುವೆ ಯುದ್ಧ ಆರಂಭವಾದಾಗ ಅದು ಭಾರತಕ್ಕೂ ಹಬ್ಬಿತು. ಇಂಗ್ಲೀಷರು ಕೂಡಲೇ ಭಾರತದಲ್ಲಿದ್ದ ಫ್ರೆಂಚರ ಎಲ್ಲಾ ವಸಾಹತುಗಳನ್ನು ಸದೆ ಬಡಿಯಲಾರಂಭಿಸಿದರು. ಅವುಗಳಲ್ಲಿ ಫ್ರೆಂಚ್ ದಳಪತಿ ಮಹೆಯ ಅಧೀನದಲ್ಲಿದ್ದುದೂ ಒಂದಾಗಿತ್ತು. ಮಹೆಯ ವಸಾಹತು ಭಾರತದಲ್ಲಿ ಪ್ರಮುಖ ವಸ್ತು ವಿತರಣಾ ಕೇಂದ್ರವಾಗಿತ್ತು.[18] ಅವರ ಮೂಲಕ ಅವನು ಪಾಶ್ಚಿಮಾತ್ಯ ದೇಶಗಳಿಂದ ಯುದ್ಧ ಸಲಕರಣೆಗಳನ್ನು ಆಮದು ಮಾಡಿಕೊಳ್ಳುತ್ತಿದ್ದ. ಆ ವಸಾಹತುವಿನ ಆಕ್ರಮಣ ಮಹೆಗೆ ಬಲವಾದ ಆಘಾತವನ್ನುಂಟು ಮಾಡಿತು. ಏಕೆಂದರೆ ಪಶ್ಚಿಮ ದೇಶಗಳಿಂದ ಬರುತ್ತಿದ್ದ ಯುದ್ಧೋಪಕರಣಗಳು ನಿಂತು ಹೋದವಲ್ಲದೆ, ಪಾಶ್ಚಿಮಾತ್ಯ ವಿಧಾನದ ಯುದ್ಧ ತರಬೇತಿಯನ್ನು ಹೊಂದಿದ ಅವನ ಸೈನಿಕರಿಗೆ ಹೋರಾಡಲು ಅಸಾಧ್ಯವಾಯಿತು. ಎರಡನೆಯದಾಗಿ ಗುಂಟೂರಿನ ವ್ಯವಹಾರವು ಮಹೆಯನ್ನು ಸಾಕಷ್ಟು ಕುಪಿತನಾಗಿ ಮಾಡಿತ್ತು. ಆ ಪ್ರದೇಶವು ನಿಜಾಮನ ಚಿಕ್ಕ ತಮ್ಮ ಬಸಲತ್‌ಜಂಗನ ಜಹಗೀರಾಗಿದ್ದು, ಇಂಗ್ಲೀಷರು ಅದನ್ನು ಬಲತ್ಕಾರವಾಗಿ ಆಕ್ರಮಿಸಿದರು. ಈ ಆಕ್ರಮಣ ನಿಜಾಮನನ್ನು ಹೈದರನನ್ನೂ ಬಹಳವಾಗಿ ರೇಗಿಸಿತು. ಇದು ಕಾರಣವಾದರೂ, ನಿಜಾಮನು ತನ್ನ ಅಧೀನದಲ್ಲಿದ್ದ ಬಹುಮುಖ್ಯವಾದ ಪ್ರಾಂತ್ಯವನ್ನು ಇದರಿಂದ ಕಳೆದುಕೊಂಡರೆ, ತನ್ನ ಅಪ್ಪಣೆ ಇಲ್ಲದೆ ತನ್ನ ಪ್ರದೇಶದ ಮೂಲಕ ಇಂಗ್ಲೀಷರು ತಮ್ಮ ಪಡೆಗಳನ್ನು ಸಾಗಿಸಿಕೊಂಡು ಹೋದರೆಂದು ಹೈದರನು ಕುಪಿತನಾದ. ಅಲ್ಲದೆ ಅವನಿಗೆ ತನ್ನ ರಾಜ್ಯದ ವಾಯುವ್ಯ ಸರಹದ್ದಿನ ತನಕ ಇಂಗ್ಲೀಷರು ಬರುವುದು ಬೇಡವಾಗಿತ್ತು. ಹೈದರನು ಇಂಗ್ಲೀಷರ ಮೇಲೆ ಯುದ್ಧ ಹೂಡಿದ. ಮೂರನೆಯ ಅತಿಮುಖ್ಯ ಕಾರಣವೆಂದರೆ, ಮಲಬಾರಿನ ಸಮುದ್ರ ತೀರದಲ್ಲಿದ್ದ ನಾಯಕರನ್ನು ಇಂಗ್ಲೀಷರು ಹೈದರನ ವಿರುದ್ಧ ಯುದ್ಧ ಹೂಡಲು

ಪ್ರೋತ್ಸಾಹಿಸುತ್ತಿದ್ದರು.[69] ಕಡೆಯದಾಗಿ, ಇಂಗ್ಲೀಷರು ರಘೋಬನನ್ನು ಮರಾಠರ ಪೇಶ್ವೆಯಾಗಿ ನೇಮಕ ಮಾಡಿದ್ದು ಮರಾಠ ಸರದಾರರನ್ನೆಲ್ಲಾ ಬಹುವಾಗಿ ರೇಗಿಸಿತು. ಅದರ ಪರಿಣಾಮವಾಗಿ ಸಿಂಧ್ಯ, ಬೋಸ್ಲೆ, ಗಾಯಕವಾಡ್, ಹೋಳ್ಕರ್ ಮತ್ತು ನಾನಾ ಇವರೇ ಮೊದಲಾದ ಮರಾಠ ಪ್ರಾಂತ್ಯಗಳ ಮುಖ್ಯರೊಳಗೆ ಅಸಮಧಾನದ ಕಿಡಿಸಿಡಿಯತಲ್ಲದೆ, ಹೈದರ್ ಮತ್ತು ನಿಜಾಮರು ಒಗ್ಗೂಡಿದಂತೆ ಈ ಎಲ್ಲಾ ಸರದಾರರು ಇಂಗ್ಲೀಷರ ವಿರುದ್ಧ ಒಂದುಗೂಡಿದರು. ಇವರೊಡನೆ ಫ್ರೆಂಚರೂ, ಡಚ್ಚರೂ ಸೇರಿಕೊಂಡರು.

ಈ ಮೈತ್ರಿಕೂಟ ಮುಂದೆ ಬ್ರಿಟಿಷರ ಜೊತೆಯಲ್ಲಿ ಹೋರಾಡುವುದಕ್ಕೆ ಅನುವುವಾದವು. ಈ ಒಪ್ಪಂದಕ್ಕೆ ನಿಷ್ಠವಾಗಿದ್ದ ಹೈದರ್ ಒಂದು ಲಕ್ಷಕ್ಕೂ ಹೆಚ್ಚು ಸೈನ್ಯ ಸಂಗ್ರಹಿಸಿ ಆರ್ಕಾಟಿಕ್ ಮೇಲೆ ಉಗ್ರದಾಳಿ ನಡೆಸಿದ. ಕರ್ನಲ್ ಬೇಲಿಯ ಪಡೆಯನ್ನು ಸಂಪೂರ್ಣ ನಾಶಗೊಳಿಸಿ ಅವನನ್ನು ಸೆರೆ ಹಿಡಿಯಲಾಯಿತು. ದೆಹಲಿಯ ಷಾ ಆಲಂ, ಔದ್‌ನ ಷಿಯ–ಉದ್–ದೌಲ ಮತ್ತು ಬಂಗಾಳದ ಮೀರ್‌ಖಾಸಿಂ ಇವರ ಪ್ರಬಲ ಕೂಟವನ್ನು ಸೋಲಿಸಿದ. ಬಕ್ಸಾರ್ ಯುದ್ಧವೀರ ಜನರಲ್ ಹಕ್ಟರ್ ಮನ್ರೋ ಹೈದರನನ್ನು ಎದುರಿಸಲಾರದೆ ಫಿರಂಗಿಗಳನ್ನು ಮತ್ತು ಕೋವಿಗಳನ್ನು ಕಾಂಜೀವರಂ ಕೆರೆಗೆ ಎಸೆದು ಪಲಾಯನ ಮಾಡಿದ. ಪರಿಣಾಮವಾಗಿ, ವೈಟ್‌ಹಿಲ್ ಮುಖ್ಯಾಧಿಕಾರಿಯಾಗಿ ನಿರ್ವಹಿಸುತ್ತಿದ್ದ ಮದರಾಸು ಸರ್ಕಾರ ರದ್ದುಗೊಂಡಿತು. ಹೀಗೆ ಹೈದರ್ ಎರಡನೆಯ ಮೈಸೂರು ಯುದ್ಧವನ್ನು ಯಶಸ್ವಿಯಾಗಿ ನಿರ್ವಹಿಸಿದ.

ಆದರೆ ಒಕ್ಕೂಟದ ಇತರ ಭಾಗಿಗಳ ಸಾಧನೆ ಸಪ್ಪೆಯಾಗಿತ್ತು. ನಿಜಾಮನು ಬರೀ ಮಾತಿನಿಂದ ಹೊತ್ತು ಕಳೆದನಲ್ಲದೆ ಒಬ್ಬ ಸೈನಿಕನನ್ನೂ ಹೋರಾಡಲು ಕಳುಹಿಸಲಿಲ್ಲ. ಇಂಗ್ಲೀಷ ರೊಡನೆ ಬಹುಕಾಲ ಹೋರಾಡಿದ ಬೋಸ್ಲೆ ಕಡೆಗೆ ಅವರ ಮಿತ್ರನಾದ. ಪ್ರಾರಂಭದ ಹೋರಾಟ ದಲ್ಲಿಯೇ ಸೋಲನ್ನನುಭವಿಸಿದ ಸಿಂಧ್ಯನು ಸಾಲ್ಬಾಯಿ ಬಳಿ ಇಂಗ್ಲೀಷರೊಡನೆ ಪ್ರತ್ಯೇಕ ಒಪ್ಪಂದ ವನ್ನು ಮಾಡಿಕೊಂಡು ಸರ್ ಅಯರ್‌ಕೂಟ್‌ನು ಕಲ್ಕತ್ತದಿಂದ ದಕ್ಷಿಣಕ್ಕೆ ಬಂದೊಡನೆ ಹೈದರನು ಒಂದೆರಡು ಕಡೆಗಳಲ್ಲಿ ಸೋಲಬೇಕಾಗಿ ಬಂದರೂ ದೃಢಮನಸ್ಕನಾಗಿದ್ದು ಇಂಗ್ಲೀಷರನ್ನು ಎದುರಿಸಿ ಸೋಲಿಸಿದ ಕೀರ್ತಿಯನ್ನು ತಾನು ಉಳಿಸಿಕೊಂಡ. ಆರ್ಕಾಟನ್ನು ಮುಖ್ಯಕೇಂದ್ರವಾಗಿ ಮಾಡಿಕೊಂಡ. ಆದರೆ ದುರದೃಷ್ಟವಶಾತ್ ವಿಧಿ ಇವನನ್ನು ಹೆಚ್ಚು ಕಾಲ ಬಿಡಲಿಲ್ಲ. ಹೈದರ್ 1782ರ ಡಿಸೆಂಬರ್ 16 ರಂದು ಯುದ್ಧ ನಿರತನಾಗಿದ್ದಾಗಲೇ ಮರಣಹೊಂದಿದ.[70]

## ಟಿಪ್ಪುಸುಲ್ತಾನ್

ಯುದ್ಧ ನಡೆಯುತ್ತಿರುವಾಗಲೇ ಹೈದರ್ ಮರಣ ಹೊಂದಿದ್ದರಿಂದ ಅದರ ಹೊರೆಯನ್ನು ಟಿಪ್ಪುಸುಲ್ತಾನ್ ನಿಭಾಯಿಸಬೇಕಾಯಿತು. ಯುದ್ಧ ಮುಕ್ತಾಯಗೊಳ್ಳುವ ಮೊದಲೇ ಅಧಿಕಾರ ವಹಿಸಿ ಕೊಂಡ ಟಿಪ್ಪುಸುಲ್ತಾನನು ತಕ್ಷಣವೇ ಪೂರ್ವ ಮತ್ತು ಪಶ್ಚಿಮ ದಿಕ್ಕುಗಳೆರಡು ಕಡೆಯಿಂದಲೂ ಮುನ್ನುಗ್ಗಿ ಬರುತ್ತಿದ್ದ ಬ್ರಿಟಿಷ್ ಸೈನ್ಯವನ್ನು ಧೈರ್ಯದಿಂದ ಎದುರಿಸಿ, ಅಪಾರ ನಷ್ಟಕ್ಕೆ ಈಡು ಮಾಡಿದ್ದಲ್ಲದೆ, ಅವರು ಮುಂದೆ ಸಾಗುವುದೇ ಕಷ್ಟವಾಗುವಂತೆ ಮಾಡಿದನು. ಈ ಇಕ್ಕಟ್ಟಿನಲ್ಲಿ ಸಿಕ್ಕಿ ಕೊಂಡ ಬ್ರಿಟಿಷರು ನಿರ್ವಾಹವಿಲ್ಲದೆ ಸಂಧಾನ ಮಾಡಿಕೊಳ್ಳಲು ಮುಂದೆ ಬಂದರು. ಇದೇ ಸಮಯ ದಲ್ಲಿ ಟಿಪ್ಪು ಸಾಧ್ಯವಾದ ಪ್ರಯತ್ನ ಮಾಡಿ ಪಶ್ಚಿಮ ಕರಾವಳಿಯ ಅನೇಕ ಭಾಗಗಳನ್ನು ಆಕ್ರಮಿಸಿ ಕೊಂಡಿದ್ದಲ್ಲದೆ, ದಕ್ಷಿಣ ಆರ್ಕಾಟಿನ ಕೆಲವು ಬ್ರಿಟಿಷ್ ಹಿಡಿತದಲ್ಲಿದ್ದ ಕೋಟೆಗಳನ್ನು ವಶಪಡಿಸಿ ಕೊಂಡನು. ಹೀಗೆ ನಾಲ್ಕು ವರ್ಷಗಳ ಕಾಲ ಜರುಗಿದ ಎರಡನೇ ಮೈಸೂರು ಕದನದಲ್ಲಿ ಸೋತು ಹೋದ ಬ್ರಿಟಿಷರು ಮದರಾಸಿನ ಭಾಗದಿಂದ ಟಿಪ್ಪುವನ್ನು ಹೊರಗಟ್ಟುವುದು ಕಷ್ಟಸಾಧ್ಯವೆಂದು ಅರಿತು ಸಂಧಾನಕ್ಕೆ ಸಿದ್ಧರಾದರು. ಲಿಂಡನ್ ಮೇಕಾರ್ಥಿ ಎಂಬುವನು ಟಿಪ್ಪುವಿನ ಬಳಿಗೆ ತನ್ನ ಸಂಧಾನದ ಮಧ್ಯಸ್ಥಿಕೆಗಾರ ನಿಯೋಗಿಗಳಾದ ಸಾಲ್ಡಿಯರ್ ಮತ್ತು ಸ್ಟಾಸನ್ ಎಂಬುವವರನ್ನು ಮಂಗಳೂರಿಗೆ ಕಳುಹಿಸಿಕೊಟ್ಟನು. 11ನೇ ಮಾರ್ಚ್ 1784ರಲ್ಲಿ ಟಿಪ್ಪು ಮತ್ತು ಬ್ರಿಟಿಷರ ನಡುವೆ ಒಪ್ಪಂದಕ್ಕೆ ಸಹಿ ಹಾಕಲಾಯಿತು. ಈ ಒಪ್ಪಂದವು ಮೈಸೂರಿನ ಪ್ರತಿಷ್ಠೆಯ ಕರಾರು ಮಾತ್ರವಾಗಿರದೆ ಭಾರತ ಬ್ರಿಟಿಷ್ ಇತಿಹಾಸದಲ್ಲೇ ಒಂದು ಚರಿತ್ರಾರ್ಹ ದಾಖಲೆಯಾಗಿದೆ.[71] ಈ ಕರಾರು ಏರ್ಪಡುವುದರ ಮೂಲಕ ಮೈಸೂರು ಮತ್ತು ಬ್ರಿಟಿಷರ ನಡುವೆ ಅನೇಕ ವರ್ಷಗಳಿಮದ ಬೆಳೆದು ಬಂದಿದ್ದ ಕಲಹ ಕೊನೆಗೊಂಡು ಬ್ರಿಟಿಷರ ವಶವಾಗಿದ್ದ ಕೆಲವು ಭೂಪ್ರದೇಶಗಳು ಟಿಪ್ಪುವಿನ ಕೈ ಸೇರಿದವು.

ತರುವಾಯ 1785 ರಿಂದ 1787 ರವರೆಗೆ ಎರಡು ವರ್ಷಗಳ ಕಾಲ ಟಿಪ್ಪು ಹೈದರಾಬಾದಿನ ನಿಜಾಮ ಮತ್ತು ಮರಾಠರೊಡನೆ ಹೋರಾಟ ಮಾಡಿದನು. 1784ರಲ್ಲಿ ಟಿಪ್ಪು ಮತ್ತು ಬ್ರಿಟಿಷರ ನಡುವೆ ಏರ್ಪಟ್ಟ ಮಂಗಳೂರು ಒಪ್ಪಂದದಿಂದ ಹೈದರಬಾದಿನ ನಿಜಾಮ ಮತ್ತು ಮರಾಠರ ಎಣಿಕೆ ಗಳು ತಲೆಕೆಳಗಾದವು. ಅಲ್ಲದೆ ನಿಜಾಮನು ಮೈಸೂರು ಯುದ್ಧದಲ್ಲಿ ಹೇಗೋ ಟಿಪ್ಪು ಸೋಲು ವುದು ಖಂಡಿತ ಎಂದು ಭ್ರಮಿಸಿ ಸೋತ ಬಳಿಕ ತಾನು ಬ್ರಿಟಿಷರಿಗೆ ಸಹಾಯಕವಾಗಿ ಮಧ್ಯಸ್ಥಿಕೆ ವಹಿಸಿ ತಮ್ಮಿಂದ ಕಸಿದುಕೊಂಡಿದ್ದ ಕೃಷ್ಣಾನದಿ ಪ್ರದೇಶವನ್ನು ಪುನಃ ಹಿಂದಕ್ಕೆ ಪಡೆಯ ಬೇಕೆಂದು

ಯೋಚಿಸಿದ್ದನು. ಆದರೆ ಅದಕ್ಕೆ ವಿರುದ್ಧವಾಗಿ ಘಟನೆಗಳು ಜರುಗಿದವು. ಅವರು ಮುಂದೆ ಯುದ್ಧ ನಡೆಯುವುದನ್ನೇ ನಿರೀಕ್ಷಿಸಿ ಕುಳಿತನು. ಅಲ್ಲದೆ, ನಿಜಾಮನು ಟಿಪ್ಪುವಿನ ಬಲವನ್ನಡಗಿಸಲು ತಾನು ಏಕಾಂಗಿಯಾಗಿ ಯುದ್ಧ ಮಾಡಲು ಶಕ್ತಿ ಸಾಲದೆ, ಮರಾಠರು ಇಲ್ಲವೆ ಬ್ರಿಟಿಷರು ಟಿಪ್ಪುವಿನ ಮೇಲೆ ಯುದ್ಧ ಹೂಡುವುದನ್ನೇ ಕಾದು ನೋಡುತ್ತಿದ್ದನು. ಈ ಸಮಯಕ್ಕೆ ಸರಿಯಾಗಿ ಟಿಪ್ಪುವಿನ ಸಾಮಂತ ನರಗುಂದ ದೇಸಾಯಿ ವಾರ್ಷಿಕ ಕಪ್ಪವನ್ನು ನೀಡದೆ ವಚನ ಭ್ರಷ್ಟನಾಗಿದ್ದನು. ಈ ಕಾರಣಕ್ಕಾಗಿ ಟಿಪ್ಪು ದೇಸಾಯಿಗೆ ಸಲ್ಲಿಸಬೇಕಾದ ಕಪ್ಪಕಾಣಿಕೆಯನ್ನು ತಂದೊಪ್ಪಿಸುವಂತೆ ಒತ್ತಾಯ ಮಾಡಿದನು. ದೇಸಾಯಿಯು ಕಪ್ಪವನ್ನು ತಂದೊಪ್ಪಿಸುವುದಕ್ಕೆ ಬದಲಾಗಿ ತನ್ನ ಮಿತ್ರರಾಗಿದ್ದ ಮರಾಠರ ಮೊರೆ ಹೊಕ್ಕು ಸಹಾಯವನ್ನು ಯಾಚಿಸಿದನು. ಇದು ಟಿಪ್ಪುವಿನ ಸಹನೆಯನ್ನು ಕೆಡಿಸಿತು. ಈ ಘಟನೆ ಸಾಧಾರಣ ಪ್ರಸಂಗವಾಗಿರದೆ ಅದರ ಹಿಂದೆ ಸುಪ್ತಗೊಂಡಿದ್ದ ಹಲವಾರು ಕಾರಣಗಳು ಹುಟ್ಟಿದ್ದ ರಿಂದ ಭಾರಿ ಕದನವೊಂದಕ್ಕೆ ನಾಂದಿ ಮಾಡಿಕೊಟ್ಟವು.[72] ತತ್ಪರಿಣಾಮವಾಗಿ 1786ರ ಮೇ ನಲ್ಲಿ ಮರಾಠರು ಮತ್ತು ಮೈಸೂರಿನ ನಡುವೆ ಕದನ ಪ್ರಾರಂಭವಾಯಿತು. ಟಿಪ್ಪು ಇದೇ ಸಮಯದಲ್ಲಿ ತನ್ನ ಸೈನ್ಯ ಬಲದಿಂದ ಮರಾಠರನ್ನು ಮಾತ್ರವಲ್ಲದೆ ಬ್ರಿಟಿಷರನ್ನು ಸದೆ ಬಡಿಯುವ ಶಕ್ತಿ ಹೊಂದಿದ್ದನು. 1786ರಲ್ಲಿ ಮರಾಠರು ಮಿತ್ರರ ನೆರವಿನಿಂದ ಬಾದಾಮಿಯನ್ನು ಆಕ್ರಮಿಸಿಕೊಂಡನು. ಮುಂದೆ ದಂಡನಾಯಕ ಹರಿಪಂಥನು ಅದೇ ತಿಂಗಳಲ್ಲಿ ರಾಜೇಂದ್ರಗಡವನ್ನು ಆಕ್ರಮಿಸಿಕೊಂಡನು. ಆದರೆ ಟಿಪ್ಪು ತಲೆಕೆಡಿಸಿಕೊಳ್ಳದೆ ಸಾವದಾನದಿಂದ ನಿಜಾಮನಿಗೆ ಸೇರಿದ್ದ ಅದೋನಿಯನ್ನು ಆಕ್ರಮಿಸಿಕೊಂಡು ಮರಾಠರಿಗೆ ಆಶ್ಚರ್ಯಕರವಾದ ರೀತಿಯಲ್ಲಿ ಅನಿರೀಕ್ಷಿತವಾಗಿ 1787ರ ಜನವರಿ ಯಲ್ಲಿ ಬಹದ್ದೂರ್ ಬಂದ್ ಅನ್ನು ಆಕ್ರಮಿಸಿಕೊಂಡನು. ಮರಾಠರು 1787ರ ಏಪ್ರಿಲ್‌ನಲ್ಲಿ ಗಜೇಂದ್ರ ಗಡದಲ್ಲಿ ಕರಾರನ್ನು ಮಾಡಿಕೊಂಡು ಕದನವನ್ನು ನಿಲ್ಲಿಸಿದರು. ಟಿಪ್ಪು ಸೋತ ಮರಾಠರೊಡನೆ ದ್ವೇಷವನ್ನು ಬೆಳೆಸಲು ಇಚ್ಛಿಸದೆ, ವಿಶ್ವಾಸವನ್ನು ಗಳಿಸಿಕೊಂಡು ಆ ಮೂಲಕ ತನ್ನ ಪರಮ ಶತ್ರು ಗಳಾದ ಬ್ರಿಟಿಷರನ್ನು ಹೊರ ಅಟ್ಟುವ ಪ್ರಯತ್ನಕ್ಕೆ ಅವರ ಸಹಾಯ ಮತ್ತು ಸಹಾನುಭೂತಿಯನ್ನು ನಿರೀಕ್ಷಿಸಿದನು. ಈ ದೂರಾಲೋಚನೆಯನ್ನು ಗ್ರಹಿಸಿದ ಬ್ರಿಟಿಷರು ಟಿಪ್ಪು ಯಾರನ್ನು ತಮ್ಮ ವಿಶ್ವಾಸಕ್ಕೆ ತೆಗೆದುಕೊಳ್ಳಬೇಕೆಂದು ಭಯಸಿದನೋ ಅವರನ್ನೋ ತಮ್ಮ ಕಡೆಗೆ ಆಕರ್ಷಿಸಿ ಸಂಬಂಧವನ್ನು ಭದ್ರಪಡಿಸಿಕೊಂಡರು.

ಭಾರತೀಯ ದೊರೆಗಳಲ್ಲಿ ಹಿಂದಿನಿಂದಲೂ ಉಳಿದುಕೊಂಡು ಬಂದಿದ್ದ ಒಂದು ದೌರ್ಬಲ್ಯ ವೆಂದರೆ ಪರಸ್ಪರ ದ್ವೇಷ, ವೈಮನಸ್ಸು ಮತ್ತು ಅನೈಕ್ಯಗಳು ಇದನ್ನರಿತ ಟಿಪ್ಪು ಯಾವ ದೇಶೀಯ

ರಾಜರುಗಳನ್ನು ಆಶ್ರಯಿಸದೆ ವಿದೇಶದವರ ಸಹಾಯವನ್ನು ನಿರೀಕ್ಷಿಸಿ ಫ್ರಾನ್ಸ್, ತುರ್ಕಿ, ಇರಾನ್, ಆಫ್ಘಾನಿಸ್ತಾನಗಳಿಗೆ ತನ್ನ ರಾಯಭಾರ ನಿಯೋಗಗಳನ್ನು ಕಳಿಸಿ ಅವುಗಳ ಸಂಪರ್ಕವನ್ನು ಪಡೆದನು. ಆದರೆ ಅನಿವಾರ್ಯ ಕಾರಣಗಳಿಂದ ಈ ಯಾವ ದೇಶಗಳ ಸೈನ್ಯ ಸಹಕಾರವು ಲಭಿಸದೆ ಟಿಪ್ಪು ಪ್ರಯತ್ನದ ಹಾದಿಯಲ್ಲೇ ಮುಂದುವರಿದನು. ಬ್ರಿಟಿಷರು ಟಿಪ್ಪುವಿನ ಚಟುವಟಿಕೆಗಳು ಮತ್ತು ಸಮರ ಸನ್ನಾಹಗಳನ್ನು ಅತ್ಯಂತ ಜಾಗರೂಕತೆಯಿಂದ ಗಮನಿಸುತ್ತಿದ್ದರು. ಈ ಹಿಂದೆ ಇವರಿಬ್ಬರ ಮಧ್ಯೆ ಏರ್ಪಟ್ಟ ಮಂಗಳೂರು ಕರಾರು ಕೇವಲ ಒಂದು ತಾತ್ಕಾಲಿಕ ಕದನ ನಿಲುಗಡೆಯ ಒಪ್ಪಂದವಾಗಿದ್ದುದಲ್ಲದೆ ಮತ್ತೊಂದು ಯುದ್ಧ ಜರುಗುವುದು ನಿಶ್ಚಯವಾದಂತೆ ಮಾಡಿದ್ದಿತು. ಮೊದಲಿನಿಂದಲೂ ನಿಜಾಮ ಮತ್ತು ಮರಾಠರಿಗೆ ಟಿಪ್ಪು ಬಲಾಢ್ಯನಾಗಿ ಮೇಲೇಳುತ್ತಿರುವುದು ಅಸೂಯೆ ಹುಟ್ಟಿಸಿತಲ್ಲದೆ ಸಮಯ ದೊರೆತಾಗ ಸದೆಬಡಿಯಲು ಕಾಯುತ್ತಿದ್ದರು. ಇದೇ ಸಮಯಕ್ಕೆ ಸರಿಯಾಗಿ ಟಿಪ್ಪು ಸುಲ್ತಾನನ ಸಾಮಂತನಾದ ತಿರುವಾಂಕೂರಿನ ರಾಜನು ಕೊಚ್ಚಿನ್ ಗಡಿಯ ಉದ್ದಕ್ಕೂ ಯುದ್ಧ ಮುಂಜಾಗ್ರತೆಯ ಕಂದಕಗಳನ್ನು ತೋಡಿಸಿ ಸೈನ್ಯ ಸಿದ್ಧತೆಗಳನ್ನು ಕೈಗೊಂಡನು. ಮತ್ತೊಂದು ಕಾರಣವೆಂದರೆ ಮೊದಲು ಡಚ್ಚರ ವಶದಲ್ಲಿದ್ದ ಕ್ರಾಂಗನೂರ್ ಮತ್ತು ಆಯಿಕೋಟಾ ಎಂಬ ಎರಡು ಬಂದರುಗಳನ್ನು ತನ್ನ ಟಿಪ್ಪುವಿನ ಮಧ್ಯಸ್ಥಿಕೆಯಲ್ಲಿ ತಿರುವಾಂಕೂರಿನ ರಾಜನಿಗೆ ಒಪ್ಪಿಸಿದ್ದನು. ಆದರೆ ಈಗ ಟಿಪ್ಪುವಿನ ಗಮನಕ್ಕೆ ಬಾರದಂತೆ ಆ ಎರಡು ಆಯಕಟ್ಟಿನ ಬಂದರುಗಳನ್ನು ಬ್ರಿಟಿಷರಿಗೆ ಒಪ್ಪಿಸಿದ್ದು ಅವನನ್ನು ಕೆರಳಿಸುವಂತೆ ಮಾಡಿತು.[73] ಅವನು ಯುದ್ಧವನ್ನೇ ಸಾರಿ ಕೊಚ್ಚಿಯ ಅರಣ್ಯ ಮಾರ್ಗಗಳನ್ನು ಆಕ್ರಮಿಸಿಕೊಂಡನು. ಟಿಪ್ಪು ಯುದ್ಧ ಸಾರಿದ ತಕ್ಷಣವೇ ತಿರುವಾಂಕೂರಿನ ರಾಜ ಆಪ್ತರಾದ ಬ್ರಿಟಿಷರ ಸಹಾಯವನ್ನು ಕೇಳಿದನು. ಈ ಅವಕಾಶಕ್ಕಾಗಿ ಕಾಯುತ್ತಿದ್ದ ಬ್ರಿಟಿಷರು ತಮಗೆ ಎರಡನೇ ಮೈಸೂರಿನ ಯುದ್ಧದಲ್ಲಾದ ಸೋಲು ಮತ್ತು ಮಂಗಳೂರಿನ ಒಪ್ಪಂದದ ಅಪಮಾನದ ಸೇಡು ತೀರಿಸಿಕೊಳ್ಳಲು ಮುಂದಾಗಿ ಟಿಪ್ಪುವಿನ ಮೇಲೆ ಯುದ್ಧಕ್ಕಿಳಿದನು. ಇದನ್ನೇ ನಿರೀಕ್ಷಿಸುತ್ತಿದ್ದ ನಿಜಾಮ ಮತ್ತು ಮರಾಠರು ಬ್ರಿಟಿಷರ ಬೆಂಬಲಕ್ಕೆ ಧುಮುಕಿದರು. ಹೀಗೆ ಪ್ರಾರಂಭವಾದ ಮೂರನೇ ಮೈಸೂರು ಯುದ್ಧವು 1790–1792 ರವರೆಗೆ ಎರಡು ವರ್ಷಗಳು ನಡೆಯಿತು. ಸಂಯುಕ್ತ ಸೈನ್ಯದ ದಂಡನಾಯಕನಾಗಿದ್ದ ಕಾರನ್‌ವಾಲೀಸನು 1792ರ ಫೆಬ್ರವರಿ 6ರಂದು ಶ್ರೀರಂಗಪಟ್ಟಣವನ್ನು ಸುತ್ತುವರಿದು ಮುತ್ತಿಗೆ ಹಾಕಿ ಮೈಸೂರು ಸೈನ್ಯವು ಶರಣಾಗತವಾಗುವಂತೆ ಮಾಡಿದನು. ಸೋತ ಟಿಪ್ಪು ಪ್ರತಿಭಟಿಸದೆ ಬ್ರಿಟಿಷರೊಂದಿಗೆ ಶ್ರೀರಂಗಪಟ್ಟಣದ ಕರಾರನ್ನು ಮಾಡಿಕೊಂಡನು. ಈ ಕರಾರಿನ ಪ್ರಕಾರ ತನ್ನರ್ಧ ರಾಜ್ಯವನ್ನು ಬ್ರಿಟಿಷರಿಗೆ ಒಪ್ಪಿಸಿದಲ್ಲದೆ ಮೂರು ಕೋಟಿ ರೂಪಾಯಿಗಳ ಬಾರಿ

ಮೊತ್ತವನ್ನು ಯುದ್ಧ ದಂಡವಾಗಿ ಕೊಡಬೇಕಾಯಿತು. ಇದು ಸಂದಾಯವಾಗುವವರೆಗೂ ಟಿಪ್ಪುವಿನ ಇಬ್ಬರು ಮಕ್ಕಳನ್ನು ಬ್ರಿಟಿಷರಿಗೆ ಒತ್ತೆಯಾಗಿ ಒಪ್ಪಿಸಬೇಕಾಯಿತು.

ಈ ದುರ್ಘಟನೆಯಿಂದ ಟಿಪ್ಪುವಿನ ಪ್ರತಿಷ್ಟೆ ಮತ್ತು ಸ್ವಾಭಿಮಾನದ ಮೇಲೆ ಭಾರಿ ಬರೆ ಎಳೆದಂತಾಯಿತು. ಈ ಅಪಮಾನಕ್ಕೆ ಕಾರಣರಾದ ಶತ್ರುಗಳ ಮೇಲೆ ಸೇಡು ತೀರಿಸಿಕೊಳ್ಳುವ ಛಲವಿದ್ದರೂ ಅನಿವಾರ್ಯ ಕಾರಣಗಳಿಂದ ಸುಮ್ಮನಾದನು. ಟಿಪ್ಪು ತನ್ನ ರಾಜ್ಯದ ಶಕ್ತಿ ಸಂಪನ್ಮೂಲ ಗಳನ್ನೆಲ್ಲಾ ಬಳಸಿಕೊಂಡು ಬ್ರಿಟಿಷರಿಗೆ ನೀಡಬೇಕಾಗಿದ್ದ ಯುದ್ಧದಂಡವನ್ನು ತೆತ್ತು ಅವರ ವಶದಲ್ಲಿದ್ದ ತನ್ನ ಇಬ್ಬರು ಮಕ್ಕಳನ್ನು ಮದರಾಸಿನಿಂದ ವಾಪಸ್ ಪಡೆದನು. ಅಲ್ಲದೆ ಛಲದಿಂದ ಟಿಪ್ಪುಸುಲ್ತಾನನು ಹಗಲು ರಾತ್ರಿ ದುಡಿದು ಕಳೆದುಹೋದ ತನ್ನ ಅರ್ಧ ರಾಜ್ಯವನ್ನು ಮತ್ತು ಗೌರವ ಪ್ರತಿಷ್ಟೆಗಳನ್ನು ಪುನಃ ಗಳಿಸಿಕೊಳ್ಳಲು ಸಂಕಲ್ಪಿಸಿದನು. ಈ ವೇಳೆಯಲ್ಲಿ ಬ್ರಿಟಿಷ್ ಗವರ್ನರ್ ಜನರಲ್‌ನಾಗಿದ್ದ ಸರ್‌ಜಾನ್‌ಘೋರ್ ಅಧಿಕಾರಕ್ಕೆ ಬಂದನು. ಅದೇ ವೇಳೆಯಲ್ಲಿ 1795ರಲ್ಲಿ ನಿಜಾಮ ಮತ್ತು ಮರಾಠರ ನಡುವೆ ಯುದ್ಧ ಆರಂಭವಾಯಿತು. ಹೀಗೆ ಟಿಪ್ಪುವಿನ ಶತ್ರುಗಳ ನಡುವೆ ಪ್ರಾರಂಭವಾಗಿ ಯುದ್ಧ ಸಮಯದಲ್ಲಿ ಸುಲ್ತನನು ಹಿಂದಿನ ಕದನದಲ್ಲಿ ಕಳೆದು ಕೊಂಡಿದ್ದ ಸೈನ್ಯ ಶಕ್ತಿಯನ್ನು ಉತ್ತಮ ಪಡಿಸಿಕೊಂಡನು. ಹೀಗೆ ಉತ್ತಮ ಪಡಿಸಿಕೊಂಡ ಟಿಪ್ಪು ಸುಲ್ತಾನನು ಬ್ರಿಟಿಷರನ್ನು ಎದುರು ನೋಡುತ್ತಿದ್ದನು. ಟಿಪ್ಪುಸುಲ್ತನನ ಬೆಳವಣಿಗೆ ಮತ್ತು ಚಟುವಟಿಕೆಗಳನ್ನು ಗಮನಿಸುತ್ತಿದ್ದ ಬ್ರಿಟಿಷರು ಟಿಪ್ಪುವು ಒಳಸಂಚು ಮಾಡುತ್ತಿದ್ದನೆ ಎಂದು ಗಮನಿಸಿ ಯುದ್ಧಕ್ಕೆ ಒಂದು ನೆಪವನ್ನಾಗಿ ಮಾಡಿಕೊಂಡರು.[74] ಈ ಸಂದರ್ಭದಲ್ಲಿ ಬ್ರಿಟಿಷ್ ಗೌರ್ನರ್ ಜನರಲ್‌ನಾಗಿದ್ದ ಲಾರ್ಡ್ ವೆಲ್ಲೆಸ್ಲಿಯು ವಿಳಂಬ ಮಾಡದೆ ಸಿದ್ಧತೆಗಳನ್ನು ಬಿರುಸಾಗಿ ಮಾಡಿ ಯುದ್ಧ ಸಾರಿದನು. ಟಿಪ್ಪುವಿನ ಪ್ರಯತ್ನವನ್ನು ಅಲ್ಲಗಳೆಯುವಂತಿರಲಿಲ್ಲ. ಏಕೆಂದರೆ ಸಾಧ್ಯವಾದ ಎಲ್ಲಾ ಪ್ರಯತ್ನಗಳನ್ನು ಇವನು ಮಾಡುತ್ತಿದ್ದನು. ಅದಕ್ಕೋಸ್ಕರ ಫ್ರಾನ್ಸಿನ ನೆಪೋಲಿಯನ್ ಬೋನಾ ಪಾರ್ಟಿಯೊಂದಿಗೆ ಪತ್ರ ವ್ಯವಹಾರ ಮಾಡಿದ್ದನು. ಈಜಿಪ್ಟಿನಲ್ಲಿ ಹೋರಾಟ ನಡೆಸುತ್ತಿದ್ದ ನೆಪೋಲಿಯನ್ನನು ಟಿಪ್ಪುವಿಗೆ ಉತ್ತರಿಸಿ ಭಾರತದಿಂದಲೂ ಬ್ರಿಟಿಷರನ್ನು ಹೊರಹಾಕುವ ಈತನ ಪ್ರಯತ್ನಕ್ಕೆ ತನ್ನ ಸಹಾನುಭೂತಿಯನ್ನು ವ್ಯಕ್ತಪಡಿಸಿದನು. ಆದರೆ ನೆಪೋಲಿಯನ್ನನು ಈಜಿಪ್ಟಿನಲ್ಲಿ ಸೋತು ಹೋದುದರಿಂದ ಭಾರತಕ್ಕೆ ಬರುವ ಮಾರ್ಗದಲ್ಲಿ ಬಹುದೂರ ಸಾಗಿಬಂದ ಫ್ರೆಂಚ್ ಸೈನ್ಯವನ್ನು ಸಿರಿಯದಿಂದ ಹಿಂದಕ್ಕೆ ಕರೆಸಿಕೊಳ್ಳುವಂತಾಯಿತು. ಮತ್ತೆ ಟಿಪ್ಪುವು ಆಫ್ಘಾನಿಸ್ತಾನ ಮುಂತಾದ ದೇಶಗಳೊಡನೆ ಪತ್ರ ವ್ಯವಹಾರವನ್ನು ನಡೆಸಿದ್ದನ್ನು ಮನಗಂಡ ಬ್ರಿಟಿಷರು ಟಿಪ್ಪು

ಸುಲ್ತಾನನು ಮಾಡಿದ ಪ್ರತಿಯೊಂದು ಸಂದಾಯವನ್ನು ನಿಷ್ಕ್ರಿಯಗೊಳಿಸಿ ಅವನ ಬಲವರ್ಧನೆಯನ್ನು ಹಾಳು ಮಾಡಿದರು. ಕೊನೆಗೆ ಹೈದರಬಾದಿನ ನಿಜಾಮನನ್ನು ತಮ್ಮ ಕಡೆಗೆ ಎಳೆದುಕೊಳ್ಳಲು ಪ್ರಯತ್ನಿಸಿದರು.

1795ರಲ್ಲಿ ಮರಾಠರು ಮತ್ತು ನಿಜಾಮರ ನಡುವೆ ಯುದ್ಧ ನಡೆಯಿತು. ಆಗ ನಿಜಾಮನ ಮಿತ್ರರಾದ ಬ್ರಿಟಿಷರು ಸಹಾಯಕ್ಕೆ ನಿಲ್ಲದೆ, ತಟಸ್ಥರಾಗಿ ಉಳಿದರು. ಕೊನೆಗೆ ನಿಜಾಮನು ಫ್ರೆಂಚರ ಸಹಾಯ ಮತ್ತು ದಂಡನಾಯಕರ ನೆರವನ್ನು ಪಡೆದು ಯುದ್ಧ ಮಾಡಿದನು. ಫ್ರೆಂಚರು ಇಂಗ್ಲೀಷರಿಗೂ ಶತ್ರುಗಳಾಗಿದ್ದರು. ಇದನ್ನರಿತ ವೆಲ್ಲೆಸ್ಲಿಯು ವಿಳಂಬ ಮಾಡದೆ ತನ್ನ 'ಸಹಾಯಕ ಸೈನ್ಯ ಪದ್ಧತಿ'ಯನ್ನು ಜಾರಿಗೆ ತಂದನು.[75] ಅನೇಕ ಭಾರತೀಯ ದೊರೆಗಳನ್ನು ಈ ಹೊಸ ವ್ಯವಸ್ಥೆಗೆ ಒಪ್ಪಿಸಿ, ಕರಾರನ್ನು ಮಾಡಿಕೊಂಡನು. ಹೀಗೆ ಬ್ರಿಟಿಷರ ಸಹಾಯಕ ಸೈನ್ಯ ಪದ್ಧತಿಗೆ ಒಪ್ಪಿ ಒಪ್ಪಂದ ಮಾಡಿಕೊಂಡವರಲ್ಲಿ ಹೈದರಬಾದಿನ ನಿಜಾಮನು ಒಬ್ಬನು ಮತ್ತು ಒಪ್ಪಂದಕ್ಕೆ ಸಹಿ ಹಾಕಿ ಸ್ವಾತಂತ್ರ್ಯವನ್ನೇ ಮಾರಿಕೊಂಡಿದ್ದನು.[76]

ಈ ವಿಧಗಳಿಂದ ಸರ್ವಸಿದ್ಧತೆಯನ್ನು ಕೈಗೊಂಡ ಲಾರ್ಡ್ ವೆಲ್ಲೆಸ್ಲಿ ಟಿಪ್ಪುವಿನ ಎಲ್ಲಾ ಚಟುವಟಿಕೆಗಳ ಮೇಲೆ ನಿಗಾವಹಿಸಿ, ಮದರಾಸು, ಬೊಂಬಾಯಿ ಮತ್ತು ಬಂಗಾಳದಲ್ಲಿದ್ದ ಬ್ರಿಟಿಷ್ ಸೈನ್ಯವನ್ನು ಸಕಲ ಸಿದ್ಧತೆಗಳಿಂದ ತಯಾರು ಮಾಡಿದನು. ಮದರಾಸು, ಬೊಂಬಾಯಿಗಳಲ್ಲಿ ಪೂರ್ಣ ಯುದ್ಧ ಸನ್ನದ್ಧತೆಯನ್ನು ಮಾಡಿಕೊಂಡ ಬಳಿಕ ಟಿಪ್ಪುವಿನ ಮೇಲೆ ವೆಲ್ಲೆಸ್ಲಿ ವಿನಾಕಾರಣ ಯುದ್ಧ ಹೂಡುವುದು ಸಾಧ್ಯವಾಗುವಂತಿರಲಿಲ್ಲ. ಅದಕ್ಕಾಗಿ ಯಾವುದಾದರೊಂದು ನೆರವನ್ನು ಕಾಯಬೇಕಾಗಿದ್ದಿತು. ಈ ಸಮಯಕ್ಕೆ ಸರಿಯಾಗಿ ಟಿಪ್ಪು ಫ್ರೆಂಚ್ ದಳಪತಿಯೊಬ್ಬನಿಂದ ಕೇಳಿ ತಿಳಿದ ಸುಳ್ಳು ಸುದ್ದಿಯ ಪ್ರಕಾರ ಫ್ರೆಂಚ್ ಮಾರಿಷಸ್ ದ್ವೀಪಕ್ಕೆ ತನ್ನ ರಾಯಭಾರ ನಿಯೋಗವನ್ನು ಕಳುಹಿಸಿದ್ದು, ಅಕ್ಷಮ್ಯ ಅಪರಾಧವೆಂದು ಆರೋಪಿಸಿ ಬ್ರಿಟಿಷರು ಮೈಸೂರಿನ ಮೇಲೆ ಯುದ್ಧ ಸಾರಿದರು. ಎಲ್ಲಾ ಸಿದ್ಧತೆಗಳನ್ನು ಮಾಡಿಕೊಂಡ ವೆಲ್ಲೆಸ್ಲಿಯು ಹಾಗೆಯೇ ಟಿಪ್ಪುಸುಲ್ತಾನನು ಸಹಾಯಕ ಸೈನ್ಯ ಪದ್ಧತಿಯನ್ನು ಒಪ್ಪಿಕೊಳ್ಳುವುದಿಲ್ಲವೆಂದು ತಿಳಿದಿದ್ದರೂ ನೆಪಮಾತ್ರಕ್ಕಾಗಿ ಮೇಜರ್ ಡೌಟನ್‌ನನ್ನು ಟಿಪ್ಪುವಿನ ಬಳಿಗೆ ಕಳುಹಿಸಿ ಸಹಾಯಕ ಸೈನ್ಯ ಪದ್ಧತಿಗೆ ಒಪ್ಪಿಕೊಳ್ಳುವಂತೆ ಕೇಳಿದನು. ಇದು ರಾಜ್ಯದ ಸ್ವಾತಂತ್ರ್ಯವನ್ನೇ ಕಸಿದುಕೊಳ್ಳುವುದು ಮಾತ್ರವಲ್ಲದೆ, ತನ್ನ ಸ್ವಾಭಿಮಾನವನ್ನೇ ಬಲಿ ತೆಗೆದುಕೊಳ್ಳುವುದೆಂದು ತಿಳಿಸಿದ್ದ ಟಿಪ್ಪು ಅದನ್ನು ತಿರಸ್ಕರಿಸಿ ಯುದ್ಧವನ್ನೇ ಆಹ್ವಾನಿಸಿದನು.[77] 1799ರಲ್ಲಿ

ಪ್ರಾರಂಭವಾದ ಈ ನಾಲ್ಕನೆಯ ಮೈಸೂರು ಯುದ್ಧವು ನಿರ್ಣಾಯಕ ಯುದ್ಧವಾಯಿತು. 1799ರಲ್ಲಿ ಜನರಲ್ ಹ್ಯಾರಿಸನ್ ನಾಯಕತ್ವದಲ್ಲಿ ಮದರಾಸಿನಿಂದ ಹೊರಟ ಬ್ರಿಟಿಷ್ ಸೈನ್ಯ ಮೈಸೂರಿನತ್ತ ಧಾವಿಸಿತು. ಹಾಗೆಯೇ ಬೊಂಬಾಯಿ ಕಡೆಯಿಂದ ಆರ್ಥರ್ ವೆಲ್ಲೆಸ್ಲಿಯ ನಾಯಕತ್ವದ ಮತ್ತೊಂದು ಬ್ರಿಟಿಷ್ ಪಡೆ ಉತ್ತರ ದಿಕ್ಕಿನಿಂದ ಮೈಸೂರನ್ನು ಮುತ್ತಿಗೆ ಹಾಕಿತು. ಹಾಗೆಯೇ ಮೂರನೆಯ ಪಡೆಯು ಹೈದರಬಾದಿನ ಕಡೆಯಿಂದ ಹೊರಟು ಬ್ರಿಟಿಷರ ಪಡೆಯನ್ನು ಸೇರಿಕೊಂಡಿತು. ಹೀಗೆ ಎಲ್ಲಾ ಕಡೆಯಿಂದಲೂ ಸುತ್ತುವರಿದವು. ಬ್ರಿಟಿಷರ ಪಡೆಗಳನ್ನು ಎದುರಿಸಲು ಟಿಪ್ಪು ಬಲವಾದ ಸಿದ್ಧತೆಗಳನ್ನು ಮಾಡಿಕೊಂಡಿರಲಿಲ್ಲ. ಆದಾಗ್ಯೂ ಧೈರ್ಯ ಸಾಹಸದಿಂದ ಮುನ್ನುಗ್ಗಿ ಮದರಾಸಿನಿಂದ ಹೊರಟು ದಕ್ಷಿಣ ದಿಕ್ಕಿನಿಂದ ಮೈಸೂರನ್ನು ಮುತ್ತಿಗೆ ಹಾಕಲು ಬರುತ್ತಿದ್ದ ಬ್ರಿಟಿಷ್ ಸೈನ್ಯವನ್ನು ಮಳವಳ್ಳಿಯ ಬಳಿ ತಡೆದು ಹೋರಾಡಿದನು. ಹಾಗೆಯೇ ಉತ್ತರ ದಿಕ್ಕಿನಿಂದ ಬರುತ್ತಿದ್ದ ಮತ್ತೊಂದು ಬ್ರಿಟಿಷ್ ಪಡೆಯನ್ನು ಪಿರಿಯಾಪಟ್ಟಣದ ಬಳಿ ಎದುರಿಸಿ ಹೋರಾಡಿ ಕೈಸಾಗದೆ ಮೈಸೂರು ಸೈನ್ಯ ಹಿಮ್ಮೆಟ್ಟಿತು. ಕೊನೆಗೆ ಮುಂದುವರಿದ ಬ್ರಿಟಿಷರು ಟಿಪ್ಪು ಮತ್ತು ಅವನ ಭದ್ರವಾದ ಕೋಟೆ ಮತ್ತು ನದಿಯ ರಕ್ಷಣೆಯನ್ನು ಹೊಂದಿದ್ದ ಶ್ರೀರಂಗಪಟ್ಟಣವನ್ನು ಸುತ್ತುವರಿದು, ಕೊನೆಗೆ ರಾತ್ರಿ ವೇಳೆಯಲ್ಲಿ ಕೋಟೆಯ ದುರ್ಬಲ ರಕ್ಷಣೆ ಸ್ಥಾನವನ್ನು ಗಮನಿಸಿ ನದಿಯನ್ನು ದಾಟಿ ಭಾರಿ ಫಿರಂಗಿಗಳಿಂದ ಕೋಟೆ ಗೋಡೆಯನ್ನು ಉಡಾಯಿಸಿ ಮುರಿದು ನುಗ್ಗಿದರು. 1799ರ ಮೇ 4 ರಂದು ಶ್ರೀರಂಗಪಟ್ಟಣವನ್ನು ಪ್ರವೇಶಿಸಿ ಜನರಲ್ ಹ್ಯಾರೀಸನ್ ಮುತ್ತಿಗೆ ಹಾಕಿದನು. ಟಿಪ್ಪು ಈ ದುರ್ಘಟನೆಯನ್ನು ತಿಳಿದು ವೀರಾವೇಶದಿಂದ ಹೋರಾಡಿ ಶತ್ರು ಸೈನ್ಯಗಳ ರುಂಡಗಳ ತುಂಡರಿಸಿ ಹೊರಾಡುವ ಸಂದರ್ಭದಲ್ಲಿ ದುರಾದೃಷ್ಟವಶಾತ್ ಶತ್ರುವೊಬ್ಬನ ಗುಂಡೇಟು ಆತನಿಗೆ ತಾಗಿ ರಣರಂಗದ ಮಧ್ಯದಲ್ಲಿ ಮಡಿದನು.[78] ಇಲ್ಲಿನ ಹೈದರಾಲಿ ಮತ್ತು ಟಿಪ್ಪುಸುಲ್ತಾನ್ ಶ್ರೀರಂಗ ಪಟ್ಟಣದ ಅಭಿವೃದ್ಧಿಗಾಗಿ ಮಾಡಿದ ಫಲ ಬ್ರಿಟಿಷರ ಕುತಂತ್ರದಿಂದ ಮಣ್ಣು ಪಾಲಾಯಿತು.

ನಂತರದ ಬೆಳವಣಿಗೆಯಲ್ಲಿ, ಸಂಪದ್ಭರಿತವಾಗಿದ್ದ ಶ್ರೀರಂಗಪಟ್ಟಣ ಬ್ರಿಟಿಷರ ವಶಕ್ಕೆ ಸೇರಿತು. ಈ ನಿಟ್ಟಿನಲ್ಲಿ ಬ್ರಿಟಿಷರು ಮೈಸೂರು ಸಂಸ್ಥಾನದ ಹಕ್ಕುದಾರಿಕೆಯನ್ನು ನಿರ್ಣಯಿಸಿ ವೆಲ್ಲೆಸ್ಲಿಯು ಪರಾಜಿತ ಪ್ರದೇಶದ ಒಂದು ಭಾಗವನ್ನು ಮೈಸೂರಿನ ರಾಜವಂಶೀಯರಿಗೂ ಉಳಿದ ಭಾಗವನ್ನು ಈಸ್ಟ್ ಇಂಡಿಯಾ ಕಂಪನಿ, ನಿಜಾಮ ಮತ್ತು ಪೇಶ್ವೆಗಳಿಗೆ ಹಂಚುವುದರಿಂದ ತೀರ್ಮಾನವಾಯಿತು. ಈ ತೀರ್ಮಾನದಂತೆ ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಮೈಸೂರು ಸಂಸ್ಥಾನಕ್ಕೆ ಮಾಡಿದ ಫಲ ನುಚ್ಚುನೂರಾಯಿತು.

ಮೈಸೂರಿನ ಒಡೆಯರು ಶ್ರೀರಂಗಪಟ್ಟಣವನ್ನು ಕೇಂದ್ರವನ್ನಾಗಿ ಮಾಡಿಕೊಂಡು ನಡೆಸಿದ ರಾಜಕೀಯ ಚಟುವಟಿಕೆಗಳು ಶ್ರೀರಂಗಪಟ್ಟಣ ಮತ್ತು ಅದರ ಸುತ್ತಮುತ್ತಲಿನ ಶಾಸನಗಳಲ್ಲಿ ದಾಖಲಾಗಿವೆ. ಅವುಗಳ ಸ್ಥೂಲವಾದ ವಿವರಗಳನ್ನು ಇಲ್ಲಿ ನೀಡಬಹುದು.

ಮೈಸೂರು ಮನೆತನಕ್ಕೆ ಸೇರಿರುವ ಶಾಸನವೊಂದು ಕರಿಘಟ್ಟದಲ್ಲಿ ದೊರೆತಿದೆ. ಈ ಶಾಸನದಲ್ಲಿ ದೇವಾಲಯವು ಮೈಸೂರ ರಾಜ ಒಡೆಯರ ಸೇವೆ ಎಂದಿದೆ.[80] ಈ ರಾಜ ಒಡೆಯನು ಕ್ರಿ.ಶ. 1578 ರಿಂದ 1617ರವರೆಗೆ ಆಳಿದ ಅರಸನಾಗಿದ್ದಾನೆ.

ಅರಕೆರೆಯ ಶಾಸನದ ಪ್ರಕಾರ, ಮೈಸೂರು ಚಾಮರಾಜ ಒಡೆಯರ ಮಗ ದೇವರಾಜನು ಮಂಟಪವೊಂದನ್ನು ಕಟ್ಟಿಸಿದನೆಂದು ಹೇಳಿದೆ.[81] ಸಮಕಾಲೀನ ಅರಸನಾದ ಚಾಮರಾಜ ಒಡೆಯನಿಗೆ ಮಕ್ಕಳಿಲ್ಲದೆ ರಾಜ ಒಡೆಯನ ಮಗ ಇಮ್ಮಡಿ ರಾಜ ಒಡೆಯನು ಆತನ ಉತ್ತರಾಧಿಕಾರಿಯಾದ ನೆಂದು ತಿಳಿದಿದೆ. ಆದರೆ ವಾಸ್ತವಿಕವಾಗಿ ಈತನಿಗೆ ಮಕ್ಕಳಿದ್ದರೂ ಅವರೆಲ್ಲಾ ಅಲ್ಪ ವಯಸ್ಕರಾಗಿ ಮರಣ ಹೊಂದಿದರು. ದೇವಚಂದ್ರನ ರಾಜಾವಳಿ ಕಥೆಯಲ್ಲಿ "ಚಾಮರಾಜ ಒಡೆಯನು ದವರಾಜಮ್ ಮೊದಲಾದ ಕುಮಾರರಮ್ ಪಡೆದು" ಎಂದು ಹೇಳಿರುವುದನ್ನು ಗಮನಿಸಿದರೆ ಆ ದೇವರಾಜನೇ ಪ್ರಸ್ತುತ ಶಾಸನದಲ್ಲಿ ಉಲ್ಲೇಖಗೊಂಡ ದೇವರಾಜನೆಂದು ಊಹಿಸಬಹುದು.

ಕಂಠೀರವ ನರಸರಾಜನ ಕಾಲಕ್ಕೆ ಸೇರಿದ ತಾಮ್ರ ಶಾಸನವೊಂದು ದೊರೆತಿದೆ. ಇದು ನಾಗರ ಲಿಪಿಯಲ್ಲಿ ಕೆತ್ತಲಾದ ಸಂಸ್ಕೃತ ಶಾಸನ. ಈ ಶಾಸನದ ಪ್ರಕಾರ, ಸುಕದೊರೆ ಮತ್ತು ಅದಕ್ಕೆ ಸೇರಿದ ಏಳು ಕಾಲುವಳಿಗಳನ್ನು ಒಟ್ಟುಗೂಡಿಸಿ ರಾಜೇಶ ಕಂಠೀರವನರಸ ನೃಪಾಂಬೋಧಿ ಅಗ್ರಹಾರ ವೆಂದು ಹೆಸರನ್ನಿಟ್ಟು ನಾನಾ ಗೋತ್ರ ಸೂತ್ರಗಳ ಬ್ರಾಹ್ಮಣರಿಗೆ ದಾನ ಮಾಡಿದನೆಂದೂ ಒಂದು ವರ್ಷಕ್ಕೆ ಆಗುವಷ್ಟು ಗ್ರಾಸವನ್ನೊಳಗೊಂಡ ಮನೆಗಳನ್ನು ಸಹ ಸಜ್ಜುಗೊಳಿಸಿ ದಾನವಾಗಿ ಕೊಟ್ಟ ನೆಂದೂ ಹೇಳಿದೆ.[82] ಶಾಸನದ ಕೊನೆಯಲ್ಲಿ ಶ್ರೀ ಕಂಠೀರವ ನರಸರಾಜು ಎಂದು ಅರಸನ ಅಂಕಿತವನ್ನು ಕೆತ್ತಲಾಗಿದೆ.

ದೇವರಾಜ ಒಡೆಯನ ಕಾಲಕ್ಕೆ ಸೇರಿದ ಮತ್ತೊಂದು ಶಾಸನ ಶ್ರೀರಂಗಪಟ್ಟಣದಲ್ಲಿ ದೊರೆತಿದೆ. ಈ ದೇವರಾಜ ಒಡೆಯನು ಕಂಠೀರವ ನರಸರಾಜನ ಚಿಕ್ಕಪ್ಪನಾದ ಮುಪ್ಪಿನ ದೇವ ರಾಜನ ಮೂರನೆಯ ಮಗ ಈತನನ್ನು ಕೆಂಪದೇವನೆಂದು ಕರೆಯಲಾಗುತ್ತಿತ್ತು. ಪ್ರಸ್ತುತ ಶಾಸನದಲ್ಲಿ

ದಾನಿ ಮರಿದೇವರಾಜ ಒಡೆಯ. ಈತ ದೇವರಾಜನು ತಮ್ಮ ಮುಪ್ಪಿನ ದೇವರಾಜನ ಕಿರಿಯ ಮಗ. ತನ್ನ ಸೋದರನೊಡನೆ ರಾಜಧಾನಿಯಲ್ಲಿದ್ದ ಈತ ಅಣ್ಣನನ್ನು ಮುದದಿಂದ ಸೇವಿಸುತ್ತಿದ್ದನೆಂದೂ, "ಜಯತಿ ಶುಭ ಗುಣ್ಯೆ ಸ್ವೈರ ದ್ವಿತೀಯಸ್ತೃತೀಯಃ ಶ್ರುತಜನಸುರಭೂಜೋ ದೇವರಾಜಕ್ಷಿತೀಂದ್ರ: ಪರಿಚರತಿ ಮುದಾಯಂ ಭವ್ಯಕರ್ಮಾನುಜನ್ಮಾಸಖಲು ಮರಿಯದೇವಕ್ಷ್ಮಾ ಪತಿಸ್ಸತ್ಯಸಂಧ"[83] ಎಂಬ ಶ್ಲೋಕದಲ್ಲಿ ವರ್ಣಿಸಿದೆ. ಈ ರಾಜಕುಮಾರನು ಶ್ರೀರಂಗಪಟ್ಟಣದ ರಂಗನಾಥಸ್ವಾಮಿಗೂ ಮತ್ತು ರಂಗನಾಯಕಿ, ಶ್ರೀ ಪಾದದ ಅಮ್ಮ, ಉಭಯ ನಾಚಿಯರ್ ದೇವಿಗಳಿಗೂ ಪ್ರತಿದಿನ ಮಾಲೆಯ ಸೇವೆಯನ್ನು ನಡೆಸಲು ಶ್ರೀರಂಗದ ಮೊದಲಿ ಅಂಡಾನ್ ಸಂಬಂಧಿಗಳಾದ ಆರಜನ ಶ್ರೀ ವೈಷ್ಣವ ಕುಟುಂಬದವರಿಗೆ ವೀರಂಬುಧಿ ಸ್ಥಳದಲ್ಲಿರುವ ಅಲ್ಲಪ್ಪನಹಳ್ಳಿ ಎಂಬ ಗ್ರಾಮವನ್ನು ಶ್ರೀನಿವಾಸಯ್ಯಂ ಗಾರನಿಂದ ಕ್ರಯವಾಗಿ ಪಡೆದು ದಾನ ಮಾಡಿದನೆಂದು ಶಾಸನ ತಿಳಿಸುತ್ತದೆ.[84]

ದೇವರಾಜ ಒಡೆಯನು ಆಳುತ್ತಿದ್ದಾಗ ಶ್ರೀರಂಗಪಟ್ಟಣದ ಅಳಹಶಿಂಗರೈಯ್ಯಂಗಾರ್ಯನು ಮಹಾಭಾರತ ವಚನವನ್ನು ಮಾಡಿದಾಗ ಯುದಿಷ್ಠಿರಾಭಿಷೇಕ ಪ್ರಸಂಗವನ್ನು ಕೇಳಿದ ಸಂದರ್ಭದಲ್ಲಿ ಆತನಿಗೆ ನರಸೀಪುರದ ಹೋಬಳಿಗೆ ಸೇರಿದ ಮುಂದಗೆರೆ ಸ್ಥಳದ ನಾಟನಹಳ್ಳಿ ಮತ್ತು ಬಿರಂಬಳ್ಳಿ ಎಂಬ ಗ್ರಾಮಗಳನ್ನು ದಾನವಾಗಿ ನೀಡಿದನು. ಈ ಪ್ರತಿಗ್ರಹಿಯು ಆ ನಂತರ, ಚಿಕ್ಕದೇವ ಮಹಾರಾಜನ ಕಾಲದಲ್ಲಿ (1668) ಬೀರಂಬಳ್ಳಿ ಗ್ರಾಮವನ್ನು ಮೇಲುಕೋಟೆಯ ದೇವಸ್ಥಾನದ ಶ್ರೀ ಭಂಡಾರಕ್ಕೆ ಬಿಟ್ಟುಕೊಟ್ಟು ಅದಕ್ಕೆ ಬದಲಾಗಿ ಈ ಮೊದಲೇ ದೇವಸ್ಥಾನಕ್ಕೆ ಬಿಟ್ಟಿದ್ದ ಕೊತ್ತಾಗಾಲ ಸ್ಥಳದ ಶಿಂಗನಮಾರನಹಳ್ಳಿ ಎಂಬ ಗ್ರಾಮವನ್ನು ಪಡೆದುದಾಗಿಯೂ ಬೀರಂಬಳ್ಳಿ ಗ್ರಾಮದ ಉತ್ಪನ್ನವನ್ನು ಆ ದೇವಾಲಯದಲ್ಲಿ ಆಚರಿಸುವ ರಾಮಾನುಜರ ಹುಟ್ಟುಹಬ್ಬದ ಹತ್ತು ದಿವಸಗಳ ಸೇವೆಗಾಗಿ ವಿನಿಯೋಗಿಸಲು ದತ್ತಿ ಬಿಡಲಾಯಿತ್ತೆಂದೂ ಶಾಸನ ತಿಳಿಸುತ್ತದೆ.[85] ಇದರಿಂದ ಬಹುಶಃ ಬೀರಂಬಳ್ಳಿ ಗ್ರಾಮದ ಉತ್ಪನ್ನವು ಬದಲಾಗಿ ಪಡೆದ ಗ್ರಾಮದ ಉತ್ಪನ್ನಕ್ಕಿಂತಲೂ ಹೆಚ್ಚಾಗಿದ್ದು ಈ ಹೆಚ್ಚುವರಿ ಹಣವನ್ನು ಹೀಗೆ ವಿನಿಯೋಗಿಸುವ ಏರ್ಪಾಡು ಮಾಡಲಾಯಿತ್ತೆಂದು ಊಹಿಸ ಬಹುದಾಗಿದೆ.

ಇದೇ ಚಿಕ್ಕದೇವ ಮಹಾರಾಜ ಒಡೆಯನ ಕಾಲಕ್ಕೆ ಸೇರಿದ ಶಾಸನವೊಂದು ಶ್ರೀರಂಗ ಪಟ್ಟಣದ ರಂಗನಾಥಸ್ವಾಮಿ ದೇವಾಲಯದಲ್ಲಿರುವ ಕೋದಂಡರಾಮ ದೇವಸ್ಥಾನದಲ್ಲಿ ನಡೆಯುವ ಪ್ರತಿದಿನದ ಪೂಜೆ, ಶ್ರೀ ರಾಮನವಮಿಯ ಉತ್ಸವ ಮುಂತಾದ ಸೇವೆಗಳಿಗಾಗಿ ಬಳಗುಳದ ಸ್ಥಳದ

ಅವ್ವೇರಹಳ್ಳಿ ಗ್ರಾಮವನ್ನು ಚಿನ್ನಯ್ಯಂಗಾರ್ ಮತ್ತು ಚಿಂತಾಮಣಯ್ಯಂಗಾರ್ ಎಂಬ ಇಬ್ಬರಿಂದ ಕ್ರಯಕ್ಕೆ ಪಡೆದು ದಾನ ಮಾಡಿದುದರ ಬಗ್ಗೆ ತಿಳಿಸುತ್ತದೆ.[86] ದಾನಿ ದೇವರಾಜ ಒಡೆಯನ ಚಂಬಿನ ಊಳಿಗದ ಚಲುವವ್ವೆಯ ಮಗ ದೊಡ್ಡದೇವಯ್ಯ, ದೇವರಾಜ ಒಡೆಯನನ್ನು ಚಾಮರಾಜ ಒಡೆಯರ ಪಾತ್ರ, ದೇವರಾಜ ಒಡೆಯರ ಪುತ್ರ ಎಂದು ಹೇಳಿರುವುದರಿಂದ ಈ ದೇವರಾಜ ಒಡೆಯನು ಮರಿ ದೇವ ರಾಜ ಒಡೆಯನಾಗಿರುವುದು ಸ್ಪಷ್ಟ ಎಂದು ಮೇಲೆ ಚಿಕ್ಕದೇವರಾಜನ ಆಳ್ವಿಕೆಯ ಕಾಲದಲ್ಲೂ ಆತನ ಚಿಕ್ಕಪ್ಪನಾದ ಈ ದೇವರಾಜ ಒಡೆಯನು ಬದುಕಿದ್ದುದ್ದಲ್ಲದೆ ಅರಸನ ಗೌರವಾದರಗಳಿಗೆ ಪಾತ್ರನಾಗಿದ್ದನೆಂಬುದೂ ತಿಳಿದುಬರುತ್ತದೆ.

ಇಮ್ಮಡಿ ಕೃಷ್ಣರಾಜನ ವಂಶಾವಳಿಯನ್ನು ಕೆತ್ತಲಾಗಿರುವ ಈ ಶಾಸನ ಸಂಸ್ಕೃತ, ಕನ್ನಡ ಭಾಷೆಗಳಲ್ಲಿದೆ. ಈ ಶಾಸನದ ಪ್ರಕಾರ, ಯಾದವ ಪುರವೆನಿಸಿದ ತೊಂಡನೂರು ಮತ್ತು ಕುರುವಂಕ ನಾಡಿನಲ್ಲಿನ ಅತ್ತಿಕುಪ್ಪ ಗ್ರಾಮಗಳನ್ನು ಅವುಗಳ ಕಾಲುವಳಿಗಳೊಡನೆ ಅಗ್ರಹಾರಗಳನ್ನಾಗಿ ಪರಿವರ್ತಿಸಿ, 112 ವೃತ್ತಿಗಳನ್ನಾಗಿ ವಿಭಜನೆ, ಬ್ರಾಹ್ಮಣರನ್ನು ಅಲ್ಲಿ ನೆಲೆಗೊಳಿಸಿದ ವಿಷಯವನ್ನು ತಿಳಿಸುತ್ತದೆ.[87]

ಪಾಂಡವಪುರದಲ್ಲಿ ಎರಡು ತಾಮ್ರ ಶಾಸನಗಳು ದೊರೆತಿವೆ. ಒಂದು ಶಾಸನದ ಪ್ರಕಾರ, ಅರಸನು ತನ್ನ ತಂದೆ ತಾಯಿಗಳು ಕಂಚಿಯ ವರದರಾಜಸ್ವಾಮಿಯ ಸೇವೆಗೆ ಹಿಂದೆ ಮಾಡಿದ್ದ ದಾನಗಳನ್ನು ಊರ್ಜಿತಗೊಳಿಸಿದುದಲ್ಲದೆ ಸ್ವತಃ 500 ಕಂಠೀರವ ಗುಳಿಗೆ ವರಹಗಳನ್ನು, 12 ಗ್ರಾಮಗಳನ್ನು ಸಹ ದಾನವಾಗಿ ನೀಡಿದನೆಂದು ಹೇಳಿದೆ.[88] ಇದನ್ನು ಎಂದಿನಂತೆ ಅಳಗಿಯ ಮನವಾಳ ರಾಮಾನುಜಜೀಯರು ನಡೆಸಿಕೊಂಡು ಬರುವ ಏರ್ಪಾಡನ್ನು ಸಹ ಮಾಡಲಾಯಿತು. ಹೂಗರನಾಡಿನ ನಾಗಮಂಗಲ ಸ್ಥಳಕ್ಕೆ ಸೇರಿದ ಹುಳ್ಳೇನಹಳ್ಳಿ ಮತ್ತು ಅದಕ್ಕೆ ಸೇರಿದ ನಾಲ್ಕು ಕಾಲುವಳಿಗಳನ್ನು ಸಹ ಅರಸನು ಅಳಹಸಿಂಘ್ರನ ಮಗ ಸಿಂಗೆಪೆರುಮಾಳನಿಗೆ ದನ ನೀಡಿದ ವಿಷಯವನ್ನು ಮತ್ತೊಂದು ಶಾಸನ ತಿಳಿಸುತ್ತದೆ.[89]

ಇಮ್ಮಡಿ ಕೃಷ್ಣರಾಜ ಒಡೆಯನ ಕಾಲಕ್ಕೆ ಸೇರಿದ ಮೂರು ಶಾಸನಗಳ ಪ್ರಕಾರ, ಅರಸನು ಹೈದರಾಲಿ ಬಹದೂರನಿಗೆ ಚಟ್ಟಂಗರ ಗ್ರಾಮವನ್ನು ಕೊಟ್ಟನೆಂದು ಹೇಳುವ, ಅದೇ ಚಟ್ಟಂಗೆರೆ ಗ್ರಾಮದ ಶಾಸನಗಳಲ್ಲಿ ಸ್ವಲ್ಪ ಬದಲಾವಣೆಗಳಿವೆ. ತೊಣ್ಣೂರಿನ ನಿಲಾಮ ಶೂದಬಾದರಿ ದರಗಾ

ದಲ್ಲಿ ನಡೆಸುವ ದರಿದ್ರರ ಧರ್ಮಕ್ಕೆ ಅಂದರೆ ಅವರ ಆಹಾರ ದಾನಕ್ಕೆ ಈ ಗ್ರಾಮವನ್ನು ದಾನ ಮಾಡಲಾಯಿತ್ತೆಂದು ಶಾಸನವೊಂದು ತಿಳಿಸುತ್ತದೆ.[90] ಗ್ರಾಮದ ಹುಟ್ಟುವಳಿಯ ಜೊತೆಗೆ ಅಡಿಕೆ ತೋಟದ ಹುಟ್ಟುವಳಿಯನ್ನೂ ದಾನ ಮಾಡಲಾಯಿತೆಂದಿದೆ. ಆ ತೋಟವನ್ನು ಹೈದರಲ್ಲಿಯು 300 ವರಹಗಳಿಗೆ ಕೊಂಡು ದಾನ ಮಾಡಿದನು.[91] ಫಕೀರರ ಪ್ರಸ್ತಾಪವು ಮತ್ತೊಂದು ಶಾಸನದಲ್ಲಿ ಇದೆ. ಬಹುಶಃ ಅವರಿಗೂ ಇಂತಹ ವ್ಯವಸ್ಥೆಯನ್ನು ಮಾಡಲಾಯಿತು. ಶಾಸನದ ಕಾಲದ ವೇಳೆಗಾಗಲೇ ದಳವಾಯಿ ನಂಜರಾಜಯ್ಯನು ಹೈದರನಿಗೆ ನವಾಬ್ ಹೈದರ್ ಅಲಿಖಾನ್ ಬಹದೂರ್ ಎಂಬ ಬಿರುದನ್ನಿತ್ತಿದ್ದು, ಆ ಬಿರುದನ್ನೇ ಶಾಸನದಲ್ಲಿ ಉಪಯೋಗಿಸಲಾಗಿದೆ.[92] ತಿರುಚನಾಪಳ್ಳಿಯಿಂದ ಹೊರಟ ಹೈದರನು ದಿಂಡಿಗಲ್, ಸೇಲಂ ಮಾರ್ಗವಾಗಿ ಶ್ರೀರಂಗಪಟ್ಟಣವನ್ನು ಆಗಸ್ಟ್ ತಿಂಗಳಲ್ಲಿ ತಲುಪಿದನೆಂದು ತಿಳಿಸುತ್ತದೆ.[93] ಆದರೆ ಪ್ರಸ್ತುತ ಶಾಸನಗಳನ್ನು ಗಮನಿಸಿದರೆ ಅದಕ್ಕೂ ಮೊದಲೇ ಆತ ಶ್ರೀರಂಗಪಟ್ಟಣವನ್ನು ತಲುಪಿದಂತೆ ತೋರುತ್ತದೆ. ಈ ಗ್ರಾಮಗಳ ಕಂದಾಯದ ಬೆಲೆಯನ್ನು ಹೈದರನು ಭಂಡಾರಕ್ಕೆ ಈ ಮೊದಲೇ ಕೊಟ್ಟಿದ್ದನೆಂದೂ ಮೈಸೂರಿನ ಆಡಳಿತದ ಮೇಲೆ ಆತನ ಪ್ರಭಾವ ಎಷ್ಟರ ಮಟ್ಟಿಗಿದ್ದಿತೆಂಬುದನ್ನು ಇವು ಸೂಚಿಸುತ್ತದೆಂದೂ ಶ್ರೀ ಹಯವದನರಾವ್ ಹೇಳಿದ್ದಾರೆ.[94]

ಶ್ರೀರಂಗಪಟ್ಟಣದ ಪಶ್ಚಿಮ ರಂಗನಾಥಸ್ವಾಮಿಯವರ ಸನ್ನಿಧಿಗೆ ಈಶಾನ್ಯದಲ್ಲಿ ದೇವರ ಸೇವೆಗಾಗಿ ಹಾಗೂ ಇತರರ ಉಪಯೋಗಕ್ಕಾಗಿ ವೇದ ಪುಷ್ಕರಣಿ ಎಂಬ ಕೊಳವನ್ನು ಅಮರಂ ಬೋದು (ಬೇಡು) ಗ್ರಾಮದ ನಲ್ಲತಂಬಿ ಮೊದಲಿಯು ಕ್ರಿ.ಶ. 1800ರಲ್ಲಿ ಕಟ್ಟಿಸಿದನು.[95] ಈತನು ವೇಲಾಯುಧ ಮೊದಲಿಯಾರನ ಮಗ, ಮುಕ್ಯಪ್ಪ ಮೊದಲಿಯ ಮೊಮ್ಮಗ. ವೇಲಾಯುಧ ಮೊದಲಿಯಾರನು ತುಳುವ ವೇಳಾಳ ಕುಲದವನೆಂದೂ ಶಿವಗೋತ್ರದವನೆಂದೂ ಹೇಳಿದೆ.96 ಈ ಶಾಸನವನ್ನು ತಮಿಳು ಲಿಪಿಯಲ್ಲಿ ಬರೆಯಲಾಗಿದೆ.

ಮೇಲಿನ ರಾಜಕೀಯ ಚರಿತ್ರೆಯ ವಿವರಗಳಿಂದ ಅನೇಕ ತೀರ್ಮಾನಗಳನ್ನು ಕೈಗೊಳ್ಳ ಬಹುದು. ಒಂದನೆಯದಾಗಿ, 1610ರಲ್ಲಿ ಶ್ರೀರಂಗಪಟ್ಟಣವು ಒಡೆಯರ ವಂಶದವರ ಆಳ್ವಿಕೆಗೆ ಬಂದಿತು. ರಾಜ ಒಡೆಯರು ಶ್ರೀರಂಗಪಟ್ಟಣವನ್ನು ರಾಜಧಾನಿಯಾಗಿ ಮಾಡಿಕೊಂಡಿದ್ದರಿಂದ ಅವರ ಪ್ರತಿಷ್ಠೆ ಬೆಳೆಯಲು ಸಹಕಾರಿಯಾಯಿತು. ರಾಜಕೀಯ ದೃಷ್ಟಿಯಿಂದ ಶ್ರೀರಂಗಪಟ್ಟಣವು ಆಯಾ ಕಟ್ಟಿನ ಸ್ಥಳದಲ್ಲಿ ಇದ್ದುದರಿಂದ ಒಡೆಯರಿಗೆ ಒಳ್ಳೆಯ ರಕ್ಷಣೆಯನ್ನು ನೀಡಿತು. ಎರಡನೆಯದಾಗಿ,

ಶ್ರೀರಂಗಪಟ್ಟಣವು ಕಂಠೀರವ ನರಸರಾಜ ಒಡೆಯ (1638-1662) ಮತ್ತು ಚಿಕ್ಕದೇವರಾಜ ಒಡೆಯರ (1672-1704) ಆಳ್ವಿಕೆಯ ಕಾಲದಲ್ಲಿ ಶ್ರೀರಂಗಪಟ್ಟಣವು ಮತ್ತಷ್ಟು ಬೆಳೆಯಿತು. ಅದರ ವಿವರಗಳು ಸಮಕಾಲೀನ ಸಾಹಿತ್ಯ ಕೃತಿಗಳಲ್ಲಿ ದೊರಕುತ್ತವೆ. ಮೂರನೆಯದಾಗಿ, ಶ್ರೀರಂಗಪಟ್ಟಣಕ್ಕೆ ನಾನಾ ಕಡೆಗಳಿಂದ ಐಶ್ವರ್ಯ ಹರಿದು ಬಂದಿತು. ತೆರಿಗೆಗಳ ಮೂಲಕ ಹಾಗೂ ಸೂರೆಯ ಮೂಲಕ ರಾಜರು ಶ್ರೀರಂಗಪಟ್ಟಣಕ್ಕೆ ಐಶ್ವರ್ಯವನ್ನು ತಂದು ತುಂಬಿದರು. ಇದು ಅಲ್ಲಿನ ಬೆಳವಣಿಗೆಗೆ ಪೂರಕವಾಯಿತು. ನಾಲ್ಕನೆಯದಾಗಿ, ರಾಜಕೀಯ ಕೇಂದ್ರವಾಗಿದ್ದುದರಿಂದ ನಾನಾ ವರ್ಗದ ನಾನಾ ರೀತಿಯ ಜನಾಂಗದವರು ಇಲ್ಲಿ ಬಂದು ಸೇರುವಂತಾಯಿತು. ಕನ್ನಡಿಗರು, ತಮಿಳರು, ತೆಲುಗರು, ಸೈನಿಕರು, ವ್ಯಾಪಾರಿಗಳು ಮತ್ತು ಧಾರ್ಮಿಕ ಮುಖಂಡರು ಹಾಗೂ ಸಾಹಿತಿಗಳು ಶ್ರೀರಂಗಪಟ್ಟಣಕ್ಕೆ ಬಂದು ರಾಜಾಶ್ರಯದಲ್ಲಿ ನಿಲ್ಲುವಂತಾಯಿತು. ಕೊನೆಯದಾಗಿ, ಕಳಲೆ ಮನೆತನದ ದಳವಾಯಿಗಳು, ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿ ಶ್ರೀರಂಗಪಟ್ಟಣದ ಖ್ಯಾತಿ ಭಾರತ ಮತ್ತು ಅಂತರಾಷ್ಟ್ರೀಯ ಮಟ್ಟಕ್ಕೆ ಏರುವಂತಾಯಿತು. ಟಿಪ್ಪುಸುಲ್ತಾನನ ಕಾಲದಲ್ಲಿ ಶ್ರೀರಂಗಪಟ್ಟಣ ಅಂತರ ರಾಷ್ಟ್ರೀಯ ರಾಜಕೀಯ ಭೂಪಟದಲ್ಲಿ ಗುರುತಿಸುವಂತಾಯಿತು. ಒಟ್ಟಿನಲ್ಲಿ ರಾಜಕೀಯ ಕೇಂದ್ರವಾಗಿ ಶ್ರೀರಂಗಪಟ್ಟಣ 1799ರ ವರೆಗೆ ಉತ್ಕರ್ಷವನ್ನು ಕಂಡು ಮೂರನೇ ಕೃಷ್ಣರಾಜ ಒಡೆಯರ ಕಾಲದಲ್ಲಿ ರಾಜಧಾನಿಯ ಸ್ಥಾನವನ್ನು ಕಳೆದುಕೊಂಡು ಕೇವಲ ಧಾರ್ಮಿಕ ಕೇಂದ್ರವಾಗಿ ಅದು ಕುಗ್ಗುತ್ತಾ ಸಾಗಿತು ಎಂದು ಹೇಳಬಹುದು.

## ಅಡಿಟಿಪ್ಪಣಿಗಳು

1) M.H.Krishna – A guide to Srirangapattana, Mysore, 1937, p.3
2) ಎ.ಕ.6 (ಎನ್.ಎಸ್) ಪಾಂ.ಪು.164
3) ಅದೇಲ ಪಾಂ.ಪು.260–261, 262
4) ಎ.ಕ.6. (ಎನ್.ಎಸ್) ಶ್ರೀ.ಪ.25, ಕ್ರಿ.ಶ. 1430
5) ಅದೇ; ಶ್ರೀ.ಪ. 3, ಕ್ರಿ.ಶ. 1431
6) ಎ.ಕ.6, (ಎನ್.ಎಸ್) ಪಾಂ.ಪು.152, ಕ್ರಿ.ಶ. 1432
7) ಅದೇ; ಪಾಂ.ಪು.218, ಕ್ರಿ.ಶ. 1446–47
8) ಎ.ಕ.6 (ಎನ್.ಎಸ್) ಶ್ರೀ.ಪ.21, ಕ್ರಿ.ಶ. 1447
9) ಎ.ಕ.6 (ಎನ್.ಎಸ್) ಪಾಂಪು.179, ಕ್ರಿ.ಶ. 1448
10) ಎ.ಕ.6 (ಎನ್.ಎಸ್) ಶ್ರೀ.ಪ.93, ಕ್ರಿ.ಶ. 1448
11) ಎ.ಕ.6 (ಎನ್.ಎಸ್) ಪಾಂ.ಪು.19, ಕ್ರಿ.ಶ.1467
12) ಅದೇ; ಪಾಂಪು.163, ಕ್ರಿ.ಶ. 1469
13) ಎ.ಕ.6 (ಎನ್.ಎಸ್) ಕೃ.ಪೇ.63, ಕ್ರಿ.ಶ. 1503
14) ಅದೇ; ಕೃ.ಪೇ.71



15) ಎ.ಕ.6 (ಎನ್.ಎಸ್) ಪಾಂ.ಪು. 1341 ಕ್ರಿ.ಶ. 1528
16) ಎ.ಕ.6 (ಎನ್.ಎಸ್) ಕೃ.ಪೇ. 99, ಕ್ರಿ.ಶ. 1532
17) ಅದೇ; ಕೃ.ಪೇ. 71, ಕ್ರಿ.ಶ. 1508
18) ಎ.ಕ.6 (ಎನ್.ಎಸ್) ಪಾಂ.ಪು.138, ಕ್ರಿ.ಶ. 1534
19) ಅದೇ; ಪಾಂ.ಪು. 127
20) ಅದೇ; ಪಾಂ.ಪು. 125
21) ಎ.ಕ. 6 (ಎನ್.ಎಸ್) ಕೃ.ಪೇ. 93, ಕ್ರಿ.ಶ. 1534
22) ಎ.ಕ.6 (ಎನ್.ಎಸ್) ಶ್ರೀ. ಪ. 5, ಕ್ರಿ.ಶ.
23) ಎ.ಕ.6 (ಎನ್.ಎಸ್) ಪಾಂ.ಪು. 130, ಕ್ರಿ.ಶ. 1544
24) ಅದೇ; ಪಾಂಪು. 131, ಕ್ರಿ.ಶ. 1551
25) ಅದೇ; ಪಾಂ.ಪು. 133, ಕ್ರಿ.ಶ. 1550–51

26) ಎ.ಕ.6 (ಎನ್.ಎಸ್) ಕೃ.ಪೇ. 64, ಕ್ರಿ.ಶ. 153

27) ಎ.ಕ.6 (ಎನ್.ಎಸ್) ಪಾಂ.ಪು. 132, ಕ್ರಿ.ಶ. 1570

28) ಎ.ಕ.6 (ಎನ್.ಎಸ್) ಶ್ರೀ.ಪ.6 ಕ್ರಿ.ಶ. 1571

29) ಎ.ಕ.6 (ಎನ್.ಎಸ್) ಪಾಂ.ಪು.136, ಕ್ರಿ.ಶ. 1574

30) ಅದೇ; ಪಾಂ.ಪು. 223, ಕ್ರಿ.ಶ. 1585 ಮತ್ತು ಅದೇ; ಪಾಂ.ಪು. 230, ಕ್ರಿ.ಶ. 1584

31) ಅದೇ; ಪಾಂ.ಪು. 234, ಕ್ರಿ.ಶ. 1584

32) ಅದೇ; ಪಾಂ.ಪು. 139, ಕ್ರಿ.ಶ. 1585, ಅದೇ; ಪಾಂ.ಪು.140 ಕ್ರಿ.ಶ. 1582

33) ಅದೇ; ಪಾಂ.ಪು. 49, ಕ್ರಿ.ಶ. 1590

34) ಎ.ಕ.6 (ಎನ್.ಎಸ್) ಶ್ರೀ.ಪ. 71, ಕ್ರಿ.ಶ. 1598

35) ಅದೇ; ಶ್ರೀ ಪ.22, ಕ್ರಿ.ಶ. 1662

36) ಅದೇ; ಶ್ರೀ ಪ.8, ಕ್ರಿ.ಶ. 1528

37) ಅದೇ; ಶ್ರೀ ಪ. 8 ಕ್ರಿ.ಶ. 1528

38) ಅದೇ; ಶ್ರೀ ಪ. 8 ಕ್ರಿ.ಶ. 1528; ಅದೇ; ಶ್ರೀ.ಪ.2 ಕ್ರಿ.ಶ. 1528

39) ಅದೇ; ಶ್ರೀ ಪ. 115, ಕ್ರಿ.ಶ. 1565

40) ಅದೇ; ಶ್ರೀ.ಪ. 115, ಕ್ರಿ.ಶ. 1565

41) ಬಿ.ರಾಮಕೃಷ್ಣರಾವ್ - ಶ್ರೀ ಮನ್ಮಹಾರಾಜರವರ ವಂಶಾವಳಿ, ಭಾಗ-1, ಪು.23-28

42) ಅದೇ ಪು. 29-30

43) ಅದೇ ಪು.43-45; ಎಂ.ವಿ.ಕೃಷ್ಣರಾವ್, ಎಂ.ಕೇಶವಭಟ್- ಕರ್ನಾಟಕದ ಇತಿಹಾಸ ದರ್ಶನ, ಬೆಂಗಳೂರು, 1970, ಪು.527

44) ಬಿ.ರಾಮಕೃಷ್ಣರಾವ್ - ಶ್ರೀ ಮನ್ಮಹಾರಾಜರವರ ವಂಶಾವಳಿ ಭಾಗ-1, ಪು.45-48

45) ಅದೇ; ಪು.51-52

46) ಅದೇ; ಪು.72-78, ಎನ್.ಎಸ್.ಸುಬ್ಬರಾವ್- ಮೈಸೂರು ಕೈಪಿಡಿ ಸಂ.3, ಮೈಸೂರು 1944, ಪು.125.

47) ಅದೇ ಪು. 127-128

48) ಬಿ.ರಾಮಕೃಷ್ಣರಾವ್ - ಶ್ರೀ ಮನ್ಮಹಾರಾಜರವರ ವಂಶಾವಳಿ ಭಾಗ-1, ಪು.68-70; ಎಂ.ಎ.ಕೃಷ್ಣರಾವ್, ಎಂ.ಕೇಶವಭಟ್ - ಕರ್ನಾಟಕದ ಇತಿಹಾಸ ದರ್ಶನ, ಪು.529

49) ಅದೇ, ಪು.530

50) ಅದೇ, ಪು.531

51) ಬಿ.ರಾಮಕೃಷ್ಣರಾವ್ - ಶ್ರೀ ಮನ್ಮಹಾರಾಜರವರ ವಂಶಾವಳಿ, ಭಾಗ-1, ಪು.113-115

52) ಅದೇ, ಪು.109-110

53) ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ - ಕರ್ನಾಟಕದ ಇತಿಹಾಸ ದರ್ಶನ ಪು.644

54) ಹೆಚ್.ಹೆಚ್.ನಾಯಕ್ - ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, 1979, ಪು.781

55) ಡಾ.ಎಂ.ವಿ.ಶ್ರೀನಿವಾಸ್ - ದಳವಾಯಿ ಸಹೋದರರು (ಸಂ) ಡಾ.ಕೆ.ಎಸ್.ಶಿವಣ್ಣ, ಮೈಸೂರು 1994, ಪು.91

56) ಅದೇ, ಪು.92

57) ಅದೇ, ಪು.92, ಎಂ.ಹೆಚ್.ನಾಯಕ್ - ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ ಪು.295

58) ಅದೇ, ಪು.295

59) ನರೇಂದ್ರ ಕೃಷ್ಣಸಿನ್ಹ - ಹೈದರಾಲಿ, (ಮೂರನೆ ಆವೃತ್ತಿ) ಕಲ್ಕತ್ತ, 1959, ಪು.38-40

60) ಅದೇ, ಪು.40-41

61) ಅದೇ, ಪು.41

62) ಅದೇ, ಪು.52

63) ಎಂ.ಹೆಚ್.ನಾಯಕ್-ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಪು.1615

64) ಅದೇ ಪು.1615

65) ಡಾ.ಬಿ.ಷೇಕ್‌ಅಲಿ ಮತ್ತು ಜಿ.ಆರ್.ರಂಗಸ್ವಾಮಯ್ಯ – ದಕ್ಷಿಣ ಭಾರತದ ಇತಿಹಾಸ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, 1984, ಪು.427.

66) ಅದೇ, ಪು.427

67) ಎಂ.ಹೆಚ್.ನಾಯಕ್ – ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ ಪು.1615

68) ಅದೇ, ಪಉ.1616

69) ಅದೇ, ಪು.1616

70) ಅದೇ, ಪು.1617

71) ಡಾ.ಬಿ.ಷೇಕ್‌ಅಲಿ ಮತ್ತು ಜಿ.ಆರ್.ರಂಗಸ್ವಾಮಯ್ಯ – ದಕ್ಷಿಣ ಭಾರತದ ಇತಿಹಾಸ ಪು.433

72) ಅದೇ, ಪು.434

73) ಬಿ.ಷೇಕ್‌ಅಲಿ – ಟಿಪ್ಪುಸುಲ್ತನ್, ಹೊಸದೆಹಲಿ, 1995, ಪು.35-36

74) ಎಂ.ಹೆಚ್.ನಾಯಕ್ – ಕರ್ನಾಟಕದ ಕನ್ನಡ ವಿಷಯ ವಿಶ್ವಕೋಶ, ಪು.712

75) ಅದೇ, ಪು.712; ಬಿ.ಷೇಕ್‌ಅಲಿ–ಟಿಪ್ಪುಸುಲ್ತನ್, ಪು.58

76) ಅದೇ, ಪು.60

77) ಅದೇ, ಪು.62

78) ಅದೇ, ಪು.62

79) ಎ.ಕ.6 (ಎನ್.ಎಸ್) ಶ್ರೀ ಪ. 95, 17ನೇ ಶತಮಾನ

80) ಅದೇ ಶ್ರೀ ಪ. 111, ಕ್ರಿ.ಶ. 1625

81) ಎ.ಕ.6 (ಎನ್.ಎಸ್) ಪಾಂ.ಪು, 214

82) ಎ.ಕ.6 (ಎನ್.ಎಸ್) ಶ್ರೀ ಪ.24, ಕ್ರಿ.ಶ. 1685

83) ಅದೇ, ಶ್ರೀ ಪ.23

84) ಎ.ಕ.6 (ಎನ್.ಎಸ್) ಪಾಂ.ಪು.149

85) ಎ.ಕ.6 (ಎನ್.ಎಸ್) ಶ್ರೀ ಪ.24, ಕ್ರಿ.ಶ. 1686

86) ಎ.ಕ.6 (ಎನ್.ಎಸ್) ಪಾಂ.ಪು.99, ಕ್ರಿ.ಶ. 1722

87) ಅದೇ ಪು.215, ಕ್ರಿ.ಶ. 1724

88) ಅದೇ ಪು.216, ಕ್ರಿ.ಶ. 1725

89) ಎ.ಕ.6 (ಎನ್.ಎಸ್) ಕೃ.ಪೇ.102, ಕ್ರಿ.ಶ. 1759

90) ಅದೇ ಕೃ.ಪೇ.104

91) ಅದೇ ಕೃ.ಪೇ.103

92) C.Hayavadana Rao – History of Mysore, Vol-11, p.2206

93) Abid p.588

94) ಎ.ಕ.6 (ಎನ್.ಎಸ್) ಶ್ರೀ.ಪ.19, ಕ್ರಿ.ಶ. 1800

95) ಅದೇ ಶ್ರೀ ಪ.20

# ಅಧ್ಯಾಯ–4
# ಸಾಂಸ್ಕೃತಿಕ ಬೆಳವಣಿಗೆ

ಇಲ್ಲಿಯವರೆಗೆ ಐತಿಹಾಸಿಕ ಹಿನ್ನಲೆಯನ್ನು ಹೊಂದಿದ ಶ್ರೀರಂಗಪಟ್ಟಣ ವಿಜಯನಗರ ಅರಸರ, ಸಾಮಂತರ, ಮೈಸೂರು ಒಡೆಯರ, ದಳವಾಯಿಗಳ ಮತ್ತು ಹೈದರಾಲಿ, ಟಿಪ್ಪುಸುಲ್ತಾನರ ಕಾಲದಲ್ಲಿ ರಾಜಕೀಯವಾಗಿ ಹಂತಹಂತವಾಗಿ ಬೆಳೆದಿರುವುದನ್ನು ನೋಡಿದೆವು. ಈಗ ನಾವು ಈ ಅಧ್ಯಾಯದಲ್ಲಿ ಸಾಂಸ್ಕೃತಿಕವಾಗಿ ಶ್ರೀರಂಗಪಟ್ಟಣ ವ್ಯಕ್ತಪಡಿಸಿದ ವಿವಿಧ ಮಜಲುಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಸಂಸ್ಕೃತಿಗೆ ಎರಡು ಮುಖಗಳು ಇರುತ್ತವೆ. (1) ಅಮೂರ್ತವಾದ ಮುಖ (2) ಮೂರ್ತವಾದ ಮುಖ. ಸಂಸ್ಕೃತಿಯ ಅಮೂರ್ತವಾದ ಮುಖದಲ್ಲಿ ಭಾವನೆಗಳಿಗೆ ಮತ್ತು ಆಚರಣೆ ಗಳಿಗೆ ಹೆಚ್ಚಿನ ಪ್ರಾಧಾನ್ಯತೆ ಇರುತ್ತದೆ. ಆದರೆ ಮೂರ್ತ ಸ್ವರೂಪದ ಸಂಸ್ಕೃತಿಯ ಮುಖಕ್ಕೆ ಬೇರೆಯದೆ ಆದ ಅಭಿವ್ಯಕ್ತ ಇರುತ್ತದೆ. ವಾಸ್ತುಶಿಲ್ಪವನ್ನು ಸಂಸ್ಕೃತಿಯ ಮೂರ್ತ ಸ್ವರೂಪವೆಂದು ಹೇಳಬಹುದು. ಮೊದಲು ನಾವು ಶ್ರೀರಂಗಪಟ್ಟಣ ಹೇಗೆ ಸಂಸ್ಕೃತಿಯ ಅಮೂರ್ತ ರೂಪಗಳನ್ನು ವ್ಯಕ್ತಪಡಿಸಿತು ಎಂಬುದನ್ನು ವಿವರಿಸಿ ನಂತರ ವಾಸ್ತುಶಿಲ್ಪದ ವಿಷಯವನ್ನು ಪ್ರಸ್ತಾಪಿಸಬಹುದು.

ಕ್ರಿ.ಶ. 1336 ರಿಂದ ಕ್ರಿ.ಶ. 1610 ರವರೆಗೆ ಶ್ರೀರಂಗಪಟ್ಟಣ ವಿಜಯನಗರ ಸಾಮ್ರಾಜ್ಯದ ಭಾಗವಾಗಿದ್ದು, ವಿಜಯನಗರದ ಸಂಸ್ಕೃತಿಯನ್ನು ಶ್ರೀರಂಗಪಟ್ಟಣ ಎತ್ತಿ ಹಿಡಿಯಿತು. ಆ ಕಾಲದ ವಿವರಣೆಗಳು ಹೆಚ್ಚಾಗಿ ದೊರೆಯುವುದಿಲ್ಲ. ವಿಜಯದಶಮಿ ಅಥವಾ ದಸರೆಯನ್ನು ಶ್ರೀರಂಗಪಟ್ಟಣ ದಲ್ಲೂ ಆಚರಿಸುತ್ತಿದ್ದರೆಂದು ಹೇಳಬಹುದು. ಏಕೆಂದರೆ ಮೈಸೂರಿನ ಒಡೆಯರು ವಿಜಯದಶಮಿ ಯಂತಹ ಸಾಂಸ್ಕೃತಿಕ ಆಚರಣೆಯನ್ನು ವಿಜಯನಗರದವರಿಂದ ಪಡೆದುಕೊಂಡರು. ಇದಲ್ಲದೆ ವಿಜಯನಗರ ಕಾಲದಲ್ಲಿ ಶ್ರೀರಂಗಪಟ್ಟಣದಲ್ಲಿ ಜಾತ್ರೆ, ರಥೋತ್ಸವ, ಹಬ್ಬಹರಿದಿನಗಳ ಆಚರಣೆಗಳು ಸಹಜವಾಗಿ ರೂಢಿಯಾಗಿ ಇದ್ದುದಕ್ಕೆ ಶಾಸನಗಳಲ್ಲಿ ಆಧಾರಗಳು ದೊರಕುತ್ತವೆ. ಅರವೀಡು ವಂಶದ ರಾಜ ಪ್ರತಿನಿಧಿಗಳು ಶ್ರೀರಂಗಪಟ್ಟಣದಲ್ಲಿ ಇರುತ್ತಿದ್ದರು. ಅವರು ಇಂತಹ ಸಂಪ್ರದಾಯ ಗಳನ್ನು ಮುಂದುವರಿಸಿಕೊಂಡು ಹೋದರು. ಆ ವಂಶದ ಶ್ರೀರಂಗರಾಯ, ವೆಂಕಟಪತಿರಾಯ ಮೊದಲಾದವರು ಇಲ್ಲಿನ ಸಾಂಸ್ಕೃತಿಕ ಜೀವನಕ್ಕೆ ಪೋಷಣೆಯನ್ನು ನೀಡಿದರು. ರಾಜಕೀಯ ಬದಲಾವಣೆಯಿಂದ ಸಾಂಸ್ಕೃತಿಕ ಜೀವನದ ಬದಲಾವಣೆ ಹೆಚ್ಚಾಗಿ ಆಗಲಿಲ್ಲ. ಆದುದರಿಂದ ಕ್ರಿ.ಶ. 1610ರಲ್ಲಿ ರಾಜ ಒಡೆಯರು ಶ್ರೀರಂಗಪಟ್ಟಣವನ್ನು ಆಕ್ರಮಿಸಿಕೊಂಡು ಅದನ್ನು ತನ್ನ ರಾಜಧಾನಿ ಯನ್ನಾಗಿ ಮಾಡಿಕೊಂಡ ಮೇಲೆ, ಶ್ರೀರಂಗಪಟ್ಟಣವು ಕ್ರಿ.ಶ. 1800 ರವರೆಗೂ ರಾಜ ಪೋಷಣೆಯ

ಪರಿಣಾಮವಾಗಿ ಒಂದು ವೈವಿಧ್ಯಮಯ ಸಾಂಸ್ಕೃತಿಕ ಕೇಂದ್ರವಾಗಿ ಬೆಳೆಯಿತು ಎಂದು ಹೇಳಬಹುದು. ಆ ಕಾಲದ ವಿವರಗಳನ್ನು ಇಲ್ಲಿ ಪ್ರಸ್ತಾಪಿಸಬಹುದು.

## ಹಬ್ಬಗಳು

ಸಾರ್ವಜನಿಕ ಹಬ್ಬಗಳು ಜನ ಜೀವನದ ಸಾಂಸ್ಕೃತಿಕ ಕನ್ನಡಿಯಂತಿವೆ. ಆಚಾರ ವಿಚಾರಗಳನ್ನು ಪ್ರತಿಬಿಂಬಿಸುತ್ತವೆ. ಈ ಹಬ್ಬಗಳಲ್ಲಿ ಸ್ಥಳೀಯ ಜನರು ಭಾಗವಹಿಸುವುದಲ್ಲದೆ ನೆರೆ ಹೊರೆಯವರೂ ಕೂಡ ಇವುಗಳಲ್ಲಿ ಪಾಲ್ಗೊಳ್ಳುತ್ತಾರೆ. ದೂರದ ಮತ್ತು ಹತ್ತಿರದ ಬಂಧು ವರ್ಗದವರನ್ನು, ಮಿತ್ರ ವೃಂದದವರನ್ನು ಹಬ್ಬ ಹರಿದಿನಗಳಿಗೆ ಆಮಂತ್ರಿಸಿ ಅವರನ್ನು ಉಪಚರಿ ಸುವುದು ಒಂದು ವಾಡಿಕೆ. ಶ್ರೀರಾಮಾನುಜಾಚಾರ್ಯರ ಜನ್ಮ ದಿನೋತ್ಸವವನ್ನು ಮೇಲುಕೋಟೆಯಲ್ಲಿ ವಿಜೃಂಭಣೆಯಿಂದ ಚೈತ್ರಮಾಸದಲ್ಲಿ ಆಚರಿಸುತ್ತಾರೆ. ಇದಕ್ಕೆ "ತಿರುನಕ್ಷತ್ರಂ" ಎಂದು ಹೆಸರು. ಚಿಕ್ಕ ದೇವರಾಜ ವಂಶಾವಳಿ ಪ್ರಕಾರ ಇದು ಒಂದು ದೊಡ್ಡ ಹಬ್ಬವಾಗಿದ್ದು ಇದರಲ್ಲಿ ಪಾಳ್ಗೊಳ್ಳಲು ಶ್ರೀ ವೈಷ್ಣವರು ಹಲವಾರು "ದಿವ್ಯ ದೇಶಂಗಳಿಂದ" ಬರುತ್ತಿದ್ದರು.[1] ಮುಪ್ಪಿನ ದೇವರಾಜ ಒಡೆಯರ ಹಿರಿಯ ಮಗನೂ ಕಂಠೀರವನ ದಾಯಾದಿಯೂ ಉತ್ತರಾಧಿಕಾರಿಯೂ ಆದ ದೊಡ್ಡ ದೇವರಾಜ ಒಡೆಯನು ತಮ್ಮ ಬಂಧು ವರ್ಗದವರೊಂದಿಗೂ ರಾಜಗುರು ಅಳಸಿಂಗಚಾರ್ಯರವರೊಂದಿಗೂ ತಿರುನಕ್ಷತ್ರದ ಸಮಯದಲ್ಲಿ ಮೇಲುಕೋಟೆಗೆ ಭೇಟಿ ನೀಡಿದ್ದನು ಎಂಬುದಾಗಿ ಚಿಕ್ಕದೇವರಾಜ ವಂಶಾವಳಿ ತಿಳಿಸುತ್ತದೆ.[2]

ಶ್ರೀರಂಗಪಟ್ಟಣವು ಹಬ್ಬಗಳ ನೆಲೆಬೀಡಾಗಿದ್ದಿತು. ವಸಂತೋತ್ಸವ, ದಿಂಡಿನ ಉತ್ಸವ ಮೊದಲಾದವುಗಳನ್ನು ಶ್ರೀರಂಗನಾಥನ ದೇವಾಲಯದಲ್ಲಿ ಚೈತ್ರಮಾಸದಲ್ಲಿ ಬಹು ವಿಜೃಂಭಣೆಯಿಂದ ಆಚರಿಸಲಾಗುತ್ತಿತ್ತು. ಕಂಠೀರವನು ತನ್ನ ಆಸ್ಥಾನಿಕರೊಂದಿಗೂ ರಾಣೀವಾಸದವರೊಂದಿಗೂ ಆ ಉತ್ಸವದಲ್ಲಿ ಭಾಗವಹಿಸುತ್ತಿದ್ದನು.[3] ಅಂತೆಯೇ ಗಜೇಂದ್ರ ಮೋಕ್ಷ ("ಗಜೇಂದ್ರ ತಿರುನಾಳ") ರಥ ಸಪ್ತಮಿ ಹಬ್ಬಗಳಿಗೂ ಬಹುಜನರನ್ನು ಆಕರ್ಷಿಸುತ್ತಿದ್ದವು. ಗಜೇಂದ್ರ ತಿರುನಾಳ ರಥೋತ್ಸವವು ತುಲಾಮಾಸದಲ್ಲಿ ಅಂದರೆ ಸಾಮಾನ್ಯವಾಗಿ ಆಶ್ವಯುಜ ಹುಣ್ಣಿಮೆಯ ಮರುದಿನದಿಂದ ಪ್ರಾರಂಭ ವಾಗುತ್ತದೆ. ಸಾವಿರಾರು ಮಂದಿ ಭಕ್ತರು ರಂಗಸ್ವಾಮಿ ದೇವಾಲಯಕ್ಕೆ ಭೇಟಿ ನೀಡಿ ಈ ಉತ್ಸವ ದಲ್ಲಿ ಭಾಗವಹಿಸಿ ದೇವರಲ್ಲಿದ್ದಂತಹ ತಮ್ಮ ಭಕ್ತಿಯನ್ನು ಪ್ರದರ್ಶಿಸುತ್ತಿದ್ದರು.[4] ನಂಜರಾಜಯ್ಯನ ಉತ್ತರಾಧಿಕಾರಿಯಾಗಿ ಬಂದ ದಳವಾಯಿ ಲಿಂಗರಾಜಯ್ಯನ ಕಾಲದಲ್ಲಿ ಈ ಉತ್ಸವಗಳು ರಂಗನಾಥ

ಸ್ವಾಮಿ ದೇವಾಲಯದಲ್ಲಿ ಎಷ್ಟು ವಿಜೃಂಭಣೆಯಿಂದ ಜರುಗಿದವು ಎಂಬುದರ ಬಗ್ಗೆ ಪೂರ್ಣ ವಿವರಣೆಗಳನ್ನು ಗೋವಿಂದ ವೈದ್ಯನು ನೀಡುತ್ತಾನೆ. ಲಿಂಗೇಗೌಡನು ನಗರದ ಅಧ್ಯಕ್ಷನಾಗಿದ್ದು ಕೊಂಡು ಅಲ್ಲಿ ನಡೆಯುವ ಎಲ್ಲ ಹಬ್ಬ ಹರಿದಿನಗಳಿಗೂ ವಿಶೇಷವಾಗಿ ಪ್ರೋತ್ಸಾಹವನ್ನು ನೀಡುತ್ತಿದ್ದನು.[5] ಗಜೇಂದ್ರ ತಿರುನಾಳ್ ಉತ್ಸವದ ಒಂದು ಭಾಗವಾಗಿ ಅಂಕುರಾರ್ಪಣ, ಧ್ವಜಪಟಾ ರೋಹಣ, ಪುಷ್ಪಕೋತ್ಸವ, ಶೇಷೋತ್ಸವ ಮತ್ತು ಗರುಡೋತ್ಸವ ಇವುಗಳನ್ನು ಒಂದಾದ ಮೇಲೊಂದರಂತೆ ಆಚರಿಸಲಾಗುತ್ತಿತ್ತು.

ಗಜೇಂದ್ರ ಮೋಕ್ಷವು ತಿರುನಾಳ್ ಮಂಟಪದಲ್ಲಿ ಆರನೇ ದಿನ ಬಹು ವಿಜೃಂಭಣೆಯಿಂದ ನೆರವೇರಿಸಲಾಗುತ್ತಿತ್ತು. ಇದಾದ ನಂತರ ರಥೋತ್ಸವ ನಡೆಯುತ್ತಿತ್ತು. ಇದರ ಜೊತೆಗೆ ಅಶ್ವಾರೋ ಹಣೋತ್ಸವ, ಜಲಕ್ರೀಡೋತ್ಸವ, ಪುಷ್ಪಕೋತ್ಸವ-ಹೀಗೆ ಹಲವಾರು ಉತ್ಸವಗಳು ರಂಗನಾಥ ದೇವಾಲಯದಲ್ಲಿ ನಡೆಯುತ್ತಿದ್ದವು. ಈ ಉತ್ಸವಗಳಲ್ಲಿ ಎಲ್ಲಾ ವರ್ಗದ ಜನರು ಭಕ್ತಿಯಿಂದ ಪಾಲ್ಗೊಳ್ಳುತ್ತಿದ್ದರು.[6] ರಾಜಧಾನಿ ಶ್ರೀರಂಗಪಟ್ಟಣವನ್ನು ತಳಿರುತೋರಣ ಮಂಟಪಗಳಿಂದ ಶೃಂಗರಿಸ ಲಾಗುತ್ತಿತ್ತು. ಹಬ್ಬದ ವಾತಾವರಣ ಪ್ರದರ್ಶಿತವಾಗುತ್ತಿತ್ತು. ಜನರು ಸಡಗರದಿಂದ ಓಡಾಡುತ್ತಿದ್ದರು. ಕನ್ನಡಿಗರೇ ಅಲ್ಲದೆ ಇನ್ನೂ ಹಲವಾರು ಭಾಷೆಗಳನ್ನಾಡುವ ಜನರು ಬಹು ಸಂತೋಷದಿಂದ ಈ ಹಬ್ಬ ಹರಿದಿನಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ತೆಲುಗರು, ಕೊಂಕಣಿಗಳು, ಮಲೆಯಾಳಿಗಳು, ಅಧಿಕ ಸಂಖ್ಯೆಯಲ್ಲಿ ಬಂದು ಈ ಉತ್ಸವವನ್ನು ನೋಡುತ್ತಿದ್ದರು.[7] ಶ್ರೀ ರಂಗನಾಥ ರಥವನ್ನು ವಿವಿಧ ಬಣ್ಣದ ಹೂವುಗಳಿಂದಲೂ, ಮಕುಟಗಳಿಂದಲೂ, ಒಡವೆಗಳಿಂದಲೂ ಶೃಂಗರಿಸಲಾಗುತ್ತಿತ್ತು. ಇದನ್ನು ನೋಡಲು ಜನರು ಅಧಿಕ ಸಂಖ್ಯೆಯಲ್ಲಿ ಸೇರುತ್ತಿದ್ದರು. ಗೋವಿಂದ ವೈದ್ಯನು ರಥವನ್ನು ಕುರಿತು "ಬಳಿಕಲಾ ಸಮಯದೆ ರಂಗಧಾಮನ ರಥಸುಲಲಿತ ಶೃಂಗಾರವಾಗಿ ಬಲು ಸಂಭ್ರಮದೆ ಬರುವುದ ಬಣ್ಣಿಸುವೆನು ಸಲಿದಾಲಿಸುವುದು ಸಜ್ಜನರು" ಎಂದು ವರ್ಣಿಸುತ್ತಾನೆ.[8] ಕಂಠೀರವನು ಕುದುರೆಯ ಮೇಲೆ ಕುಳಿತು ದಳವಾಯಿಗಳು, ಮಂತ್ರಿಗಳು, ಸಾಮಂತರುಗಳು, ಆಸ್ಥಾನಿಕರು ಮೊದಲಾದ ಜನರೊಂದಿಗೂ ಅರಮನೆಯ ವಸ್ತುವಾಹನಾದಗಳೊಂದಿಗೂ, ಅಲಂಕಾರಭೂಷಿತ ನಾಗಿ, ಗಜೇಂದ್ರ ತಿರುನಾಳ್ ಉತ್ಸವವನ್ನು ವೀಕ್ಷಿಸಲು ರಂಗನಾಥ ದೇವಾಲಯಕ್ಕೆ ಹೋಗುವ ದೃಶ್ಯ ವನ್ನು ಗೋವಿಂದ ವೈದ್ಯನು ಬಹು ರಮಣೀಯವಾಗಿ ವರ್ಣಿಸಿದ್ದಾನೆ. ಉತ್ಸವವನ್ನು ಕಣ್ಣು ತುಂಬಾ ನೋಡಿ ಸಂತೋಷಗೊಂಡು ಮೂಲ ದೇವರು ಶ್ರೀರಂಗನಾಥಸ್ವಾಮಿಗೆ ಭಕ್ತಿಪೂರ್ವಕವಾಗಿ

ನಮಸ್ಕರಿಸಿ, ತೀರ್ಥ ಪ್ರಸಾದಗಳನ್ನು ಸ್ವೀಕರಿಸಿ ಅದೇ ಆಸ್ಥಾನಿಕರೊಂದಿಗೆ ಹಿಂದಿರುಗಿದ ದೃಶ್ಯ ಮನಸ್ಸನ್ನು ಸೂರೆಗೊಳ್ಳುವಂತಹುದು.[9]

ಶ್ರೀರಂಗಪಟ್ಟಣದ ಬಹುದೊಡ್ಡ ಸಾಂಸ್ಕೃತಿಕ ಉತ್ಸವ ಎಂದರೆ ನವರಾತ್ರಿ ಅಥವಾ ವಿಜಯ ದಶಮಿ ಅಥವಾ ದಸರೆಯ ಆಚರಣೆ. ಈ ಸಾಂಸ್ಕೃತಿಕ ಆಚರನೆಯ ವಿವರಗಳು ಅಂದಿನ ದಾಖಲೆ ಗಳಲ್ಲಿ ದೊರಕುತ್ತವೆ. ಅವುಗಳ ಆಧಾರದಿಂದ ಕೆಲವು ವಿವರಗಳನ್ನು ಇಲ್ಲಿ ನೀಡಬಹುದು. ಆರಂಭ ದಲ್ಲಿ ರಾಜ ಒಡೆಯರ ಕಾಲದಲ್ಲಿ ಆಚರಿಸುತ್ತಿದ್ದ ನವರಾತ್ರಿ ಉತ್ಸವದ ಕ್ರಮವನ್ನು ಇಲ್ಲಿ ಪ್ರಸ್ತಾಪಿಸ ಬಹುದು.

ಆಶ್ವಯುಜ ಶುದ್ಧ ಪ್ರಥಮದಲ್ಲಿ ದೊರೆಗಳವರು ಪ್ರಾತಃ ಕಾಲದಲ್ಲಿ ಸ್ನಾನಮಾಡಿ ಯಜ್ಞೋಪವೀತವನ್ನು ಧರಿಸಿಕೊಂಡು ನವರಾತ್ರಿಯ ಉತ್ಸವಾರ್ಥವಾಗಿ ದೇವಸ್ಥಾನಗಳಿಂದ ಬಂದ ಎಣ್ಣೆ ಅರಿಸಿನಗಳಿಂದ ಮಂಗಳ ಸ್ನಾನವನ್ನು ಮಾಡಿ ದೀಕ್ಷಾವಸ್ತ್ರವನ್ನುಟ್ಟು ಅರಮನೆಯಲ್ಲಿರುವ ಶ್ರೀ ಚಾಮುಂಡೇಶ್ವರಿ ಅಮ್ಮನವರ ಸನ್ನಿಧಿಯಲ್ಲಿ ಕಂಕಣವನ್ನು ಧರಿಸಿಕೊಂಡು ಸರ್ವಾಲಂಕಾರ ಭೂಷಿತ ರಾಗಿ ಪಟ್ಟದ ಕತ್ತಿಯನ್ನು ಹಿಡಿದು ಸೆಜ್ಜೆಯ ಮೇಲಕ್ಕೆ ಚಿತ್ತೈಸಿ ಪುಣ್ಯಾಹವನ್ನು ಮಾಡಿ ನವಗ್ರಹಾದಿ ದೇವತೆಗಳನ್ನು ಕಲಶದಲ್ಲಿ ಪೂಜಿಸಿ ಕಾಳಿಕಾ ಪುರಾಣೋಕ್ತ ಪ್ರಕಾರವಾಗಿ ಸಿಂಹಾಸನ ಪೂಜೆಯನ್ನು ನೆರವೇರಿಸಿ ಪ್ರಾರ್ಥನೆಯನ್ನು ಮಾಡಿ ಸುಮೂರ್ತದಲ್ಲಿ ಸಿಂಹಾಸನರೋಹಣವನ್ನು ಮಾಡಿದರು. ಆ ಸಮಯದಲ್ಲಿ ಅರಮನೆಯ ಮುಂದಿರುವ ಕೆಮ್ಮಣ್ಣು ಮಟ್ಟಿಯ ಸುತ್ತಲೂ ಸಾಲು ಸಾಲಾಗಿ ನಿಂತಿರುವ ಆನೆ, ಕುದುರೆ, ಒಂಟೆ, ಕಾಲಾಳುಗಳಿಂದಲೂ, ತಮ್ಮ ಭುಜ ಪರಾಕ್ರಮದಿಂದ ಸಂಪಾದಿಸಿದ ಹನುಮಧ್ವಜ, ಗರುಡಧ್ವಜ, ಮಕರಟೆಕ್ಕೆ, ಸತ್ತಿಗೆ, ಸೂರೆಪಾನ, ಚೌರಿ, ಏಟುಪಾವುಡೆ ಮುಂತಾದ ಬಿರುದುಗಳಿಂದಲೂ ಮತ್ತು "ಶ್ರೀ ಪಶ್ಚಿಮ ರಂಗನಾಥ ಪಾದಾರವಿಂದ ಬಂಝುರಾಯಿತ ಚಿತ್ತ, ಮತ್ತರಿ ಪುಷಂಡ ಖಂಡನೋದ್ದಂಡದೋರ್ದಂಡ, ಅರ್ಥಿಜನೇಪ್ಸಿತಾರ್ಥದಾನಶಾಂಡ, ಅಂಗರಾಜನ ಕುಸುಮ ಕೋದಂಡ, ಬಾಹು ದಂಡ ದೃತ ವಿವಿಧಾಯುಧ ಪ್ರಕಾಂಡ, ಬಿರುದೆತೆಂ ಬರಗಂಡ, ಮಿತ್ರ ಕುಲಕಮಲ ಮಾರ್ತಂಡ, ರಾಜ ಕಂದಪ್, ರಾಜಾಧಿರಾಜ, ಮಹಾರಾಜ" ಎಂದು ಒಗಳುತ್ತಲಿರುವ ಭಟರುಗಳಿಂದಲೂ, ವೀಣಾವೇಣು ಮೃದಂಗ ಕಹಳೆ ಭೇರಿ ಮೊದಲಾದ ವಾದ್ಯಗಳ ಧ್ವನಿಗಳಿಂದಲೂ ಆಸ್ಥಾನವು ಕಂಗೊಳಿಸುತ್ತಿರಲೂ, ಪುರೋಹಿತರು ಮೊದಲಾದ ಬ್ರಾಹ್ಮಣರುಗಳಿಂದ ಕಲಶೋಧಕ ಮಾರ್ಜನೆಯನ್ನು ಮಾಡಿಸಿಕೊಂಡು, ಕಉಲದೇವತೆಯಾದ ಶ್ರೀ

ಚಾಮುಂಡೇಶ್ವರಿ ಅಮ್ಮನವರ ಸನ್ನಿಧಿಯಲ್ಲಿ ನಡೆಯತಕ್ಕ ಜಪ ಪೂಜಾದಿಗಳಿಗೆ ವರಣವನ್ನು ಕೊಟ್ಟು, ದೇವಸ್ಥಾನಗಳಿಂದ ಬಂದ ಪ್ರಸಾದವನ್ನು ಸ್ವೀಕರಿಸಿ, ತಮ್ಮ ಗುರುಗಳು ಮುಂತಾದ ವಿದ್ವಾಂಸರು ಒಪ್ಪಿಸಿದ ಫಲ ಮಂತ್ರಾಕ್ಷತೆಗಳನ್ನು ತಮ್ಮ ಪುತ್ರರು, ಅರಸುಗಳು, ಪಾಳೆಯಗಾರರು, ಅಧಿಕಾರ ವರ್ಗದವರು ಮೊದಲಾದವರ ಮಾನಾನುಗುಣವಾಗಿ ಒಪ್ಪಿಸಿದ ಕೈಗಾಣಿಕೆಗಳನ್ನು ತೆಗೆದು ಕೊಳ್ಳುತ್ತಿರುವ ಸಮಯದಲ್ಲಿ ಪಟ್ಟದ ಆನೆ ಕುದುರೆಗಳು, ವೇಶ್ಯಾ ಸ್ತ್ರೀಯರು ಹಿಡಿದಿರುವ ಕನ್ನಾ ಕನ್ನಡಿಗಳಿಂದಲೂ, ವೀರಭದ್ರನ ಹಲಗೆಯನ್ನು ಹಿಡಿದಿರುವ ಲಿಂಗಧೀರರಿಂದಲೂ, ಸತ್ತಿಗೆ, ಸೂರ ಪಾನ, ಚಾಮರ ಮೊದಲಾದ ಬಿರುದುಗಳಿಂದಲೂ ಒಡಗೂಡಿ ಅರಮನೆಯಿಂದ ಹೊರಟು ಕೆಮ್ಮಣ್ಣು ಮಟ್ಟೆಯಲ್ಲಿ ದೊರೆಗಳವರಿಗೆ ನಮಸ್ಕರಿಸಿ ನದೀ ತೀರದಲ್ಲಿರುವ ಚಪ್ಪರಕ್ಕೆ ಬರಲು, ಎಣ್ಣೆಶಾಸ್ತ್ರವನ್ನು ಮಾಡಿ ಅರಿಸಿನ ಕುಂಕುಮವನ್ನಿಟ್ಟು ಕೊರಳಿಗೆ ಐದು ಬಗೆಯ ಧಾನ್ಯವನ್ನು ಕಟ್ಟಿ ಪುಷ್ಪಗಳಿಂದಲೂ, ಆಭರಣಗಳಿಂದಲೂ ಅಲಂಕರಿಸಿ ಮೊಸಲ ಪಟ್ಟೆಯನ್ನು ಕಟ್ಟಿರುವ ಆನೆ ಕುದುರೆಗಳನ್ನು ಮಹಾಕಾಳಿ, ಮಹಾಲಕ್ಷ್ಮಿ, ಮಹಾ ಸರಸ್ವತಿ ಎಂಬ ಮೂರು ದೇವತೆಗಳ ಆವಾಹಣೆಯನ್ನು ಮಾಡಿರುವ ಕನ್ನಾ ಕನ್ನಡಿಗಳನ್ನು ಬೆಟ್ಟದ ಕೋಟೆಯ ತಿಮ್ಮಪ್ಪರಾಜೇ ಅರಸನ ವಂಶಸ್ಥನು ಪೂಜೆ ಮಾಡಿದನು. ಬಳಿಕ ಆನೆ, ಕುದುರೆಗಳು ರಾಜ ಮರ್ಯಾದೆಯಿಂದ ನಡೆಮಡಿಯ ಮೇಲೆ ಕೆಮ್ಮಣ್ಣು ಮಟ್ಟಿಗೆ ಬಂದು ದೊರೆಗಳವರಿಗೆ ನಮಸ್ಕರಿಸಿ ಅರಮನೆಗೆ ಪ್ರವೇಶಿಸಲು ವೇಶ್ಯಾ ಸ್ತ್ರೀಯರು ಆರತಿಯನ್ನೆತ್ತಿದ ಬಳಿಕ ಅವುಗಳನ್ನು ಆವಾಸ ಸ್ಥಳದಲ್ಲಿ ಪೂಜಿಸಿ ಭಕ್ಷ್ಯ ಭೋಜ್ಯಾಧಿಗಳನ್ನು ನಿವೇಧನೆ ಮಾಡಿ ದಧ್ಯನ್ನ ಕವಳಗಳನ್ನು ಕೊಟ್ಟರು. ಇತ್ತ ದೊರೆಗಳು ಜನಗಳೊಪ್ಪಿಸಿದ ಕೈಗಾಣಿಕೆಗಳನ್ನು ಸ್ವೀಕರಿಸಿ, ಅವರವರ ತಾರತಮ್ಯವನ್ನರಿತು ಹೂವಿನ ಹಾರ, ವೀಳಯಗಳನ್ನು ಕೊಡಿಸಿ, ಅವರುಗಳಿಂದ ಪ್ರಗಾಮ ವನ್ನು ತೆಗೆದುಕೊಂಡು, ಅಪ್ಪಣೆಯನ್ನು ಕೊಟ್ಟು ಕಳುಹಿಸಿದರು. ಆ ಬಳಿಕ ಛತ್ರ 1, ಚಾಮರ 2, ಬೀಸಣಿಗೆ 1, ಸುಮಾನಗರಿ 2, ಕಾಳಂಜಿ 1, ಕನ್ನಡಿ 1, ಚಂಬಿನ ಚೀಲ 1, ನಸ್ಯದ ಡಬ್ಬಿ 1, ವೀಳಯದ ಪೆಟ್ಟಿಗೆ 1, ಎಡಬಲದ ಸೇವೆ 2, ಹಾವುಗ 1, ಏಟುಪಾವುಡೆ 2, ಇವುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಹಿಡಿದುಕೊಂಡಿರುವ ಚೇಟಿಕಾ ಸ್ತ್ರೀಯರುಗಳಿಂದ ಆಯಾ ಸಮಯಗಳಲ್ಲಿ ಸೇವೆಯನ್ನು ತೆಗೆದುಕೊಳ್ಳುತ್ತ ಸಿಂಹಾಸನದಲ್ಲಿ ಮಹೂರ್ತ ಮಾಡಿರುವ ದೊರೆಗಳನ್ನು ನೋಡಬೇಕೆಂಬ ಆಜ್ಞೆ ಯಿಂದ ಮಹಾ ಮಾತೃಶ್ರೀಯವರು ಮೊದಲಾದ ಅಂತಃಪುರಸ್ತ್ರೀ ಜನರೆಲ್ಲರೂ ತಮ್ಮ ತಮ್ಮ ಮರ್ಯಾದಾನುಸಾರವಾಗಿ ಸಿಂಹಾಸನಕ್ಕೆ ನಮಸ್ಕರಿಸಿ ಅಂತಃಪುರಕ್ಕೆ ತೆರಳಲು, ದೊರೆಗಳು ಸಿಂಹಾಸನ ದಿಂದ ಇಳಿದು ಆರೋಗಣೆಯನ್ನು ಒಪ್ಪಿಸಿಕೊಂಡ ನಂತರ ಮೂರನೆಯ ದಿವಸದಲ್ಲಿ ಮತ್ತೆ ಸಿಂಹಾಸನಾರೋಹಣವನ್ನು ಮಾಡಿ, ದೊರೆಗಳು, ಪ್ರಾಂತಃಕಾಲದಂತೆ ಒಡ್ಡೋಲಗವನ್ನು ಕೈಗೊಳ್ಳ

ತ್ತಿರುವಲ್ಲಿ ಪುಟ್ಟಸ್ವಾಮಿಯವರು ಅಳಿಯಂದಿರು ಮೊದಲಾದ ಅರಸುಗಳು, ಪಾಳೆಯಗಾರರು ಸಜ್ಜೆಯಿಂದ ಕೆಳಗೆ ಇಳಿದು ಕೈಯಲ್ಲಿ ಕತ್ತಿಯನ್ನು ಹಿಡಿದುಕೊಂಡು ಕೆಮ್ಮಣ್ಣು ಮಟ್ಟೆಯಲ್ಲಿ ನಿಂತು ತಮ್ಮ ತಮ್ಮ ಮರ್ಯಾದೆಯನುಸಾರವಾಗಿ ನಮಸ್ಕಾರವನ್ನು ಮಾಡಿದರು. ಕರಣಿಕರು ಮೊದಲಾದವರು ಕೆಮ್ಮಣ್ಣು ಮಟ್ಟೆಯಲ್ಲಿ ತಲೆಬಾಗಿ, ಕೈಗಳನ್ನು ಮುಗಿದರು. ಸೇವಕ ಜನರೆಲ್ಲರೂ ಕಟ್ಟಳೆಯ ಮೇರೆಗೆ ಪ್ರಣಾಮವನ್ನು ಗೈದು ತಮ್ಮ ತಮ್ಮ ಊಳಿಗವನ್ನು ಹಿಡಿದುಕೊಂಡು ನಿಬಂಧನೆಯ ಸ್ಥಳಗಳಲ್ಲಿ ನಿಂತುಕೊಂಡರು. ಅನಂತರ ಮೊದಲು ನಿಬಂಧನೆ ಮಾಡಿರುವ ಮೇರೆಗೆ ಜೆಟ್ಟಿಗಳ ಜೋಡಿಯನ್ನು ಕಾಳಗಕ್ಕೆ ಬಿಡಿಸಿ ಸೋಲು ಗೆಲುವುಗಳನ್ನು ಪರಾಂಬರಿಸಿ ಅವರವರ ಯೋಗ್ಯತೆಗನು ಸಾರವಾಗಿ ಉಡುಗೊರೆಗಳನ್ನು ಕೊಟ್ಟು, ಮತ್ತೊಂದು ಕಡೆಯಲ್ಲಿ ಟಗರು, ಕೋಣ ಮೊದಲಾದವು ಗಳ ಕಾಳಗವನ್ನು ದೊಂಬರು, ಪೈಲುವಾನರು ಮೊದಲಾದವರ ಆಟಗಳನ್ನು ನೋಡಿ, ಅವರವರ ತಾರತಮ್ಯವನ್ನರಿತು ವಸ್ತ್ರಾಭರಣಗಳನ್ನು ಕೊಟ್ಟು ಸಂತೋಷದಿಂದಿರುವ ಸಮಯದಲ್ಲಿ ಪ್ರಾತಃಕಾಲ ದಂತೆ ಪಟ್ಟದ್ದಾನೆ. ಕುದುರೆಗಳು ನದೀ ತೀರಕ್ಕೆ ಹೋಗಿ ಅಲ್ಲಿ ಅಗತಕ್ಕೆ ಪೂಜೆ ದೀವಟಿಗೆ ಸಾಲಾಂ ಮೊದಲಾದುದನ್ನು ನೆರವೇರಿಸಿಕೊಂಡು ಬರುತ್ತಲಿರುವ ಸಮಯದಲ್ಲಿ ದೊರೆಗಳವರಿಗೆ ದೀವಟಿಗೆ ಸಲಾಂ ಆದ ನಂತರ ಪುಟ್ಟಸ್ವಾಮಿಯವರು ಮೊದಲಾದವರು ನಮಸ್ಕರಿಸಿ, ಸಜ್ಜೆಯ ಮೇಲೆ ಕುಳಿತ ಬಳಿಕ ಪಟ್ಟದ್ದಾನೆ ಕುದುರೆಗಳು ಕೆಮ್ಮಣ್ಣು ಮಟ್ಟೆಯಲ್ಲಿ ನಿಂತು ದೊರೆಗಳಿಗೆ ಪ್ರಮಾಮವನ್ನು ಮಾಡಿ ಅರಮನೆಗೆ ಬರಲು ಪ್ರಾತಃಕಾಲದಂತೆ ಪೂಜೆ ಮುಂತಾದವನ್ನು ನೆರವೇರಿಸಿದರು. ದೊರೆಗಳು ಕೆಮ್ಮಣ್ಣು ಮಟ್ಟೆಯಲ್ಲಿ ಹತ್ತಿಸಿದ ಆಶ್ಚರ್ಯಕರವಾದ ಹಗಲಬತ್ತಿ, ನಕ್ಷತ್ರಬಾಣ, ಹೂಬಾಣ, ಚಕ್ರ ಬಾಣ ಮುಂತಾದವುಗಳನ್ನು ನೋಡುತ್ತಾ ಜನರುಗಳಿಗೆ ಹೂವಿನಹಾರ ವೀಳಯಗಳನ್ನು ಕೊಡಿಸಿ, ಅವರುಗಳಿಂದ ಪ್ರಣಾಮವನ್ನು ಸ್ವೀಕರಿಸಿ ಸಿಂಹಾಸನದಿಂದ ಇಳಿದ ಸಮಯದಲ್ಲಿ ಐದು ಕುಶಾಲ ಫಿರಂಗಿಗಳನ್ನು ಹಾರಿಸಿದ ಮೇಲೆ ಅಂತಃಪುರಕ್ಕೆ ತೆರಳಿ, ಅಲ್ಲಿ ಚೇಟಿಕಾ ಸ್ತ್ರೀಯರುಗಳಿಂದ ಹಸ್ತ ಲಾಘವ ಮುಂತಾದ ಸೇವೆಗಳನ್ನು ಅಂಗೀಕರಿಸುತ್ತಲಿರುವಾಗ ತಮ್ಮ ಪತ್ನಿಯರು ಮೊದಲಾದ ಅಂತಃಪುರ ಸ್ತ್ರೀಯರುಗಳು ಬಂದು ಅಡಿದಾವರೆಗಳಿಗೆ ಪ್ರಣಾಮವನ್ನು ಮಾಡುವುದನ್ನು ಅವಲೋಕಿ ಸುತ್ತಿರುವ ವೇಳೆಯಲ್ಲಿ ದೊರೆಗಳಿಗೆ ಜನರ ದೃಷ್ಟಿದೋಷವನ್ನು ಪರಿಹರಿಸಲು ಬಗೆಬಗೆಯ ಅನ್ನದ ನವರತ್ನದ ಆರತಿಗಳನ್ನು ಬೆಳಗಿದ ನಂತರ ತಮ್ಮ ಮಾತೃಶ್ರೀಯವರಿಗೆ ಪ್ರಣಾಮವನ್ನು ಮಾಡಿ ಅಲಂಕಾರವನ್ನು ಸಡಿಲಿಸಿ ಫಲಹಾರವನ್ನು ಒಪ್ಪಿಸಿಕೊಂಡು ಸುಖವಾಗಿ ಪವಡಿಸಿಕೊಂಡರು.[10]

ಅನಂತರ ಮಹಾನದಿಯ ದಿವಸ ಪ್ರಾತಃಕಾಲದಲ್ಲಿ ದೊರೆಗಳು ಸ್ನಾನ ಸಂಧ್ಯಾವಂದನೆಯನ್ನು ನೆರವೇರಿಸಿಕೊಂಡು ಅರಮನೆಯಲ್ಲಿ ಪಟ್ಟದ ಕತ್ತಿಯನ್ನು ಪೂಜಿಸಿ ಅಂದಳದಲ್ಲಿರಿಸಿ ಬಹು ವೈಭವ ದಿಂದ ಅರಸುಗಳು, ಸಕಲ ಜನರೊಡನೆ ಕನ್ನಾ ಕನ್ನಡಿಗಳೊಡನೆ, ಆನೆ ಕುದುರೆಗಳನ್ನು ಪಾಡ್ಯ ಮೊದಲಾದ ದಿನಗಳಲ್ಲಿ ಕಳುಹುತ್ತಿದ್ದಂತೆ ಕಾವೇರಿಯ ಉತ್ತರ ಪಾರ್ಶ್ವದಲ್ಲಿ ಗೌರಿಯ ಕಡುವಿನಲ್ಲಿ ಹಾಕಿರುವ ಚಪ್ಪರಕ್ಕೆ ಕಳುಹಿಸಿಕೊಟ್ಟರು. ಆಗ ಅಲ್ಲಿ ಪಟ್ಟದ ಕತ್ತಿಯನ್ನು ಮಡಿ ಹಾಸಿಗೆಯ ಮೇಲೆ ಇರಿಸಿ ಅಪ್ಪಣೆಯಾದ ಅರಸುಗಳಲ್ಲಿ ಒಬ್ಬರು ಮಡಿಯನ್ನುಟ್ಟುಕೊಂಡು ಬಂದು, ಆಯುಧಕ್ಕೆ ಎಣ್ಣೆ ಶಾಸ್ತ್ರ ಮುಂತಾದ ಶುಭಕಾರ್ಯಗಳನ್ನು ಮಾಡಿ ಕಲ್ಪೋಕ್ತ ವಿಧಾನದಿಂದ ಕಟ್ಟಳೆಯ ಮೇರೆಗೆ ಆನೆ ಕುದುರೆಗಳನ್ನು, ಕನ್ನಾಕನ್ನಡಿಗಳನ್ನು ಸಹ ಪೂಜಿಸಿದ ಮೇಲೆ ಬಂದ ಜನರುಗಳು ಮುಜರೆಯನ್ನು ಮಾಡಿದರು. ಅನಂತರ ಆ ಜನರುಗಳಿಗೆ ಹೂವಿನಹಾರ ವೀಳೆಯಗಳನ್ನು ಕೊಟ್ಟು ಮಹಾರಾಜ ಮರ್ಯಾದೆಯಿಂದ ಅರಮನೆಗೆ ಬರುತಲಿರುವ ಸಮಯದಲ್ಲಿ ಕುಲದೇವತೆಯಾದ ಅಮಲದೇವತೆ ಯನ್ನು ಆ ಪೂಜಾರಿಯ ಮನೆಯಿಂದ ಮತ್ತೊಂದು ಅಂದಳದಲ್ಲಿರಿಸಿ ಆಯುಧದ ಹಿಂದುಗಡೆ ಯಲ್ಲಿಯೇ ಬಿಜಯ ಮಾಡಿಸಿಕೊಂಡು ಬಂದು ಅರಮನೆಯ ಸೌಂದರ್ಯ ವಿಲಾಸದ ತೊಟ್ಟಿಯ ಹಜಾರದ ಪುಷ್ಪ ಮಂಟಪದಲ್ಲಿರಿಸಿ, ಮತ್ತೊಂದು ಅಂದಳದಲ್ಲಿರುವ ಆಯುಧಕ್ಕೂ, ಆನೆ ಕುದುರೆ ಗಳಿಗೂ ವಾರಾಂಗನೆಯರು, ನವರತ್ನದ ಆರತಿಗಳನ್ನು ಬೆಳಗಿದ ನಂತರ ದೊರೆಗಳು ಅಂದಳದಲ್ಲಿದ ಪಟ್ಟದ ಕತ್ತಿಯನ್ನು ಹಿಡಿದುಕೊಂಡು ಮೇಲುಕಟ್ಟು ಮುತ್ತಿನ ಕುಚ್ಚುಗಳಿಂದ ಅಲಂಕೃತವಾದ ಹಜಾರದ ಒಳಗೆ ಚಿನ್ನದ ಕಾಲು ಮಗೆಯಲ್ಲಿರಿಸಿ, ಪೂರ್ವ ಸಂಪ್ರದಾಯದ ಮೇರೆಗೆ ಸರಸ್ವತಿ ಪೂಜೆಯನ್ನು ಮಾಡಿ, ಆಯುಧಗಳನ್ನು ಪೂಜಿಸಿದ ನಂತರ ಅಶ್ವಪೂಜೆ, ಗಜಪೂಜೆ, ಆಂದೋಳಿ ಕಾದಿ ಪೂಜೆಗಳನ್ನು ಮಾಡಿ, ತಮ್ಮ ಕುಲದೇವತೆಯಾದ ಶ್ರೀ ಚಾಮುಂಡೇಶ್ವರಿ ಅಮ್ಮನವರ ಸನ್ನಿಧಿ ಯಲ್ಲಿ ಶತಚಂಡೀಜಪ ಮುಂತಾದ ಜಪಗಳಿಗೆ ಪೂರ್ಣಾಹುತಿಯನ್ನು ಮಾಡಿಸಿ ಜಪವನ್ನು ಬೆಳೆಸುವಂತೆ ನಿಬಂಧನೆಯನ್ನು ಮಾಡಿ ಆರೋಗಣೆಯನ್ನು ಒಪ್ಪಿಸಿಕೊಂಡರು. ಮತ್ತೆ ಮೂರನೆಯ ಜಾವದಲ್ಲಿ ಜಟ್ಟಿ ಕಾಳಗ ಮುಂತಾದ ಓಲಗವು ಬೆಳೆದ ಸಮಯದಲ್ಲಿ ಆನೆ ಕುದುರೆಗಳು ನದಿಗೆ ಹೋಗತಕ್ಕ ಕಟ್ಟಳೆಯಲ್ಲಿ ಈ ದಿನ ರಾತ್ರಿಯಲ್ಲಿ ಕಟ್ಟಳೆಯ ಮೇರೆಗೆ ಓಲಗವು ಮೊಳಗಿದ ನಂತರ ಆಯುಧಕ್ಕೆ ಪೂಜೆಯನ್ನು ನೆರವೇರಿಸಿ, ಕಂಕಣ ವಿಸರ್ಜನೆಯನ್ನು ಮಾಡಿ, ಶಿಬಾಸರವನ್ನು, ದಫ್ತರ ಗಳನ್ನು ಸಹ ಪೂಜಿಸಿ, ನೇಮದಿಂದ ಅನೇಕ ಶಾಕಪಾಕ ಭಕ್ಷ್ಯ ಭೋಜ್ಯಾಧಿಗಳಿಂದ ಅಮಲದೇವತೆ ಯನ್ನು ಆರಾಧಿಸಿ ದೊರೆಗಳು ಮೊದಲಾಗಿ ಅಂತಃಪುರದ ಸ್ತ್ರೀಯರೂ ಪುತ್ರ ಪೌತ್ರರುಗಳು ಕಾಣಿಕೆ ಯನ್ನಿತ್ತು ಪೂಜೆಯನ್ನು ಮುಂದುವರಿಸಿದರು.[11]

ವಿಜಯದಶಮಿ ದಿವಸ ದೊರೆಗಳು ನಡೆಸಿದ ಕಟ್ಟಳೆಗಳಲ್ಲಿ ಪ್ರಾತಃಕಾಲದಲ್ಲಿ ಸ್ನಾನ ಸಂಧ್ಯಾ ವಂದನೆಯನ್ನು ನೆರವೇರಿಸಿಕೊಂಡು ಸರಸ್ವತಿಯ ಉತ್ತರ ಪೂಜೆಯನ್ನು ಮಾಡಿ ಸರ್ವಾಲಂಕಾರ ಭೂಷಿತರಾಗಿ ಆಯುಧವನ್ನು ಪೂಜಿಸಿದ್ದ ಹಜಾರಕ್ಕೆ ತಂದು, ದಶಮಿ ಅರ್ಥಗಳಿಗೆ ಇದ್ದರೂ ಆ ಹೊತ್ತಿನಲ್ಲಿ ಆಯುಧಕ್ಕೆ ಪೂಜೆಯನ್ನು ಮಾಡಿದ ಮೇಲೆ ಪೂರ್ವದಂತೆ ಓಲಗ ಮುಜರ ನಡೆವ ಸಮಯದಲ್ಲಿ ಆಯುಧದ ಎದುರಿಗೆ ರಕ್ತ ಬೀಳುವಂತೆ ಜಟ್ಟಿಕಾಳಗವನ್ನು ಮಾಡಿಸಿ, ಆಯುಧಕ್ಕೆ ಬಲಿರೂಪವಾಗಿ ಕಾಳಿಕಾ ಪುರಾಣೋಕ್ತ ಪ್ರಕಾರ ಕೊಶ್ಮಾಂಡ, ಭೇದವನ್ನು ದೊರೆಗಳೇ ಮಾಡಿ ಅನಂತರ ಪಟ್ಟದ ಕತ್ತಿಯನ್ನು ಖಾಸಾ ಹಸ್ತದಿಂದ ಹಿಡಿದು ಅಂದಳದಲ್ಲಿರಿಸಿ, ಇನ್ನು ಕೆಲವು ಆಯುಧಗಳನ್ನು ಜಾತ್ರೆಯಲ್ಲಿ ಇರಿಸಿ ಉತ್ತರ ದಿಕ್ಕಿನ ಬನ್ನಿಯ ಮರದ ಮಂಟಪಕ್ಕೆ ಕಟ್ಟಿದ್ದಾನೆ. ಕುದುರೆಗಳ ಸಹಿತವಾಗಿ ಪೂರ್ವದಂತೆ ಮಹಾರಾಜ ಮರ್ಯಾದೆಯಿಂದೊಡಗೂಡಿ ಕಳುಹಿಸಿಕೊಟ್ಟರು. ಅನಂತರ ಅಮಲದೇವತೆ ಅಮ್ಮನವರನ್ನು ಪೂಜಾರಿಯ ಮನೆಗೆ ಕಳುಹಿಸಿಕೊಟ್ಟು, ಆರೋಗಣೆ ಯನ್ನು ಒಪ್ಪಿಸಿಕೊಂಡು, ಈ ದಿನದ ಮೂರನೆಯ ಜಾವದೊಳು ಬಿರುದು ಮುಂತಾದ ಸಕಲ ಮಹಾರಾಜ ಮರ್ಯಾದೆಗಳಿಂದೊಡಗೂಡಿ ಸೇನಾ ಸಮೇತರಾಗಿ ಅಂಬಾರಿಯನ್ನೇರಿ ಬನ್ನಿಯ ಮರದ ಸಮೀಪಕ್ಕೆ ಬಂದು ಅಲ್ಲಿ ವ್ಯಾಘ್ರ, ವರಾಹ, ಭಲ್ಲೂಕ, ಶಶ ಮುಂತಾದ ಅನೇಕಾರಣ್ಯ ಮೃಗಗಳನ್ನು ಹಿಡಿತರಿಸಿ ವಿನೋದದಿಂದ ಬೇಟೆಯಾಡಿ, ಶಮೀ ವೃಕ್ಷದ ಪೂಜೆಯನ್ನು ಮಾಡಿಸಿ ಪ್ರಸಾದವನ್ನು ಸ್ವೀಕರಿಸಿ, ಸಾಯಂಕಾಲವಾದ ಬಳಿಕ ದೀವಟಿಗೆಸಾಯದಿಂದ ಮರ್ಯಾದೆಗಳನ್ನಂಗೀಕರಿಸಿ ಇದರ ಜೊತೆಗೆ ಆಯುಧ ಗಜಾಶ್ವಗಳಿಗೂ ದೀವಟಿಗೆಯರಿಂದ ನಮಸ್ಕರಿಸಿ ಅವುಗಳನ್ನು ತಮ್ಮ ಸವಾರಿಯ ಹಿಂದುಗಡೆಯಲ್ಲಿಯೇ ವಿಜಯಿ ಮಾಡಿಕೊಂಡು ಬರುವಂತೆ ಅಪ್ಪಣೆಯನ್ನು ಕೊಟ್ಟು ಅತಿ ಸಂಭ್ರಮ ದಿಂದ ಅರಮನೆಗೆ ಚಿತ್ತೈಸಿ, ಅರಮನೆಯಲ್ಲಿ ನಡೆಯತಕ್ಕ ಮರ್ಯಾದೆಗಳು ನಡೆಯುವಂತೆ ಕಟ್ಟಳೆ ಯನ್ನು ಮಾಡಿಸಿ, ದೊರೆಗಳು ಅರಮನೆಯ ದೊಡ್ಡ ಹಜಾರದಲ್ಲಿ ಅತ್ಯುನ್ನತವಾದ ಭದ್ರಾಸನದಲ್ಲಿ ಮುಹೂರ್ತ ಮಾಡಿ, ಪಾಡ್ಯದ ದಿವಸ ಸಿಂಹಾಸನರೋಹಣದ ಕಾಲದಲ್ಲಿ ನಡೆದಂತೆ ನಜರು ಮುಜರೆ ಗಳನ್ನು ಒಪ್ಪಿಸಿಕೊಂಡು ಇರುವ ಸಮಯದಲ್ಲಿ ಕರಣಿಕನು ಬನ್ನಿ ಮಹಾಕಾಳಿಯ ಆಶೀರ್ವಾದದ ಪಟ್ಟೆಯನ್ನೋದಿ ಒಪ್ಪಿಸಲು ಆ ಕರಣಿಕನಿಗೆ ಹೂವಿನ ಹಾರ ವೀಳಯ ವಸ್ತ್ರಾಭರಣಗಳನ್ನು ಕೊಡಿಸಿ, ಆ ಪಟ್ಟೆಯನ್ನು ಪಟ್ಟದ ಕತ್ತಿಯಾರೆಯೊಳಗಿಟ್ಟು ಖಾಸ ಮೊಹರು ಮಾಡಿಸಿ, ಶ್ರೀ ಚಾಮುಂಡೇಶ್ವರಿ ಅಮ್ಮನವರ ಸನ್ನಿಧಿಯಲ್ಲಿ ಇರಿಸುವಂತೆ ನಿಬಂಧನೆ ಮಾಡಿ, ನಜರು ಮುಜರೆ ಯನ್ನು ಮಾಡಿದ ಜನಗಳಿಗೆ ಹೂವಿನ ಹಾರ ವೀಳೆಯವನ್ನು ಕೊಟ್ಟು ಕಳುಹಿಸುವಂತೆ ಅಪ್ಪಣೆ ಮಾಡಿದರು.[12]

ಬಳಿಕ ನವರಾತ್ರಿ ಉತ್ಸವಕ್ಕೆ ದೇಶಾಂತರದಿಂದ ಬಂದ ವೇಶ್ಯಾ ಸ್ತ್ರೀಯರು ಮುಂತಾದ ಜನರುಗಳಿಗೆ ಅವರವರ ತಾರತಮ್ಯವಿದ್ದಂತೆ ವಸ್ತ್ರಾಭರಣಗಳನ್ನು ಕೊಟ್ಟು ಈ ನವರಾತ್ರಿಯಲ್ಲಿ ಕಾಳಗವನ್ನು ಮಾಡಿದ ಜಟ್ಟಿಗಳಿಗೆ ಪರಸ್ಪರ ವೈರವಿರಬಾರದೆಂದು ಒಟ್ಟುಗೂಡಿಸಿ ಊಟ ಮಾಡಿಸಿ ಅಂಪಕ ಪೋಷಣವನ್ನು ಕೊಟ್ಟು ಕಳುಹಿಸಿದರು. ಈ ಮೇರೆಗೆ ನವರಾತ್ರಿ ಉತ್ಸವವು ತಮ್ಮ ವಂಶಪಾರಂಪರ್ಯವಾಗಿ ಮುಂದುವರಿಸಿಕೊಂಡು ಹೋಗಲು ಕಟ್ಟಳೆ ಮಾಡಿ, ಈ ವಿವರಗಳನ್ನೆಲ್ಲಾ ಅರಮನೆಯ ಆಯಕಟ್ಟಿನ ಕಾಶಿಕನ ಕಡತಕ್ಕೆ ಬರೆಸಿ, ಆಯುಧ, ಸಿಂಹಾಸನ, ಪಟ್ಟದ ಕುದುರೆ, ಪಟ್ಟದಾನ, ಇವುಗಳಿಗೆ ಪ್ರತಿನಿತ್ಯವು ಪೂಜೆ ನಡೆಯುವಂತೆಯೂ, ರಂಗಸ್ವಾಮಿ ದೇವಸ್ಥಾನ ಮುಂಭಾಗದಲ್ಲಿ ತಾವು ಹೊಸದಾಗಿ ಕಟ್ಟಿಸಿದ ಅರಮನೆಯ ಸಜ್ಜೆಯ ಮೇಲೆ ಈ ಮೂಲಕ ಓಲಗವನ್ನು ಬೆಳೆಸುವಂತೆಯೂ, ಮತ್ತು ಪ್ರತಿ ಶುಕ್ರವಾರದ ರಾತ್ರಿ ಓಲಗ ಬೆಳೆಯುವಂತೆ ಕಟ್ಟಪ್ಪಣೆ ಮಾಡಿದರು.

ಕಂಠೀರವ ನರಸರಾಜ ಒಡೆಯರ ಕಾಲದ ನವರಾತ್ರಿಯ ಆಚರಣೆಯ ಚಿತ್ರ ಇಂತಿದೆ. ಕ್ರಿ.ಶ. 1647 ಸೆಪ್ಟೆಂಬರ್ 19 ರಿಂದ 29ರ ವರೆಗೆ ನವರಾತ್ರಿ ಮಹೋತ್ಸವವನ್ನು ಶ್ರೀರಂಗಪಟ್ಟಣದಲ್ಲಿ ಹೇಗೆ ಆಚರಿಸಲಾಯಿತು ಎಂಬುದನ್ನು ದಾಖಲೆಗಳು ಹೀಗೆ ಚಿತ್ರಿಸಿವೆ. ಶರತ್ಕಾಲ ಬರುತ್ತಿದ್ದಂತೆಯೇ ಅರಮನೆಯ ಪುರೋಹಿತರುಗಳೊಂದಿಗೆ ಮಾತುಕತೆ ನಡೆಸಿ ಮಹಾನವಮಿಯ ಕಾರ್ಯಕ್ರಮಗಳನ್ನು ನಿರ್ಣಯಿಸುತ್ತಿದ್ದನು. ಮಹಾನವಮಿಯ ಹಬ್ಬವನ್ನು ಬಹುಸಂಭ್ರಮದಿಂದ ಆಚರಿಸಲು ದಳವಾಯಿ ಲಿಂಗರಾಜಯ್ಯನು ಎಲ್ಲಾ ಏರ್ಪಾಡುಗಳನ್ನು ಮಾಡಬೇಕಾಗಿದ್ದಿತು. ದಳವಾಯಿ ಆಜ್ಞೆಯ ಮೇರೆಗೆ ಶ್ರೀರಂಗಪಟ್ಟಣದ ನಗರದ ಕೊತವಾಲ ಲಿಂಗೇಗೌಡ ಶ್ರೀರಂಗಪಟ್ಟಣ ನಗರವನ್ನು ಶೃಂಗರಿಸಬೇಕಾಗಿದ್ದಿತು. ಅವನು ಬೆಲಗದ ಶಾಲೆ, ಆಸ್ಥಾನ ಮಂಟಪ, ಚಂದ್ರಶಾಲೆ, ಆಯುಧಶಾಲೆ, ಉಗ್ರಾಣ ಎಲ್ಲವನ್ನು ಶುಭ್ರಗೊಳಿಸಿ ಅರಮನೆಗೆ ಸುಣ್ಣಬಣ್ಣಗಳನ್ನು ಲೇಪಿಸಿ ಆಕರ್ಷಕವಾಗಿ ಇರುವಂತೆ ವ್ಯವಸ್ಥೆ ಮಾಡಿದನು. ಹಬ್ಬಕ್ಕೆ ಬೇಕಾದ ಎಲ್ಲಾ ವಸ್ತುಗಳನ್ನು ನಗರಕ್ಕೆ ಪೂರೈಕೆ ಆಗುವಂತೆ ಕ್ರಮ ಕೈಗೊಂಡನು. ಅಶ್ವಶಾಲೆ, ಗಜಶಾಲೆ, ಶ್ರೀರಂಗಪಟ್ಟಣದ ಬೀದಿಗಳು ಶೃಂಗರಿಸಲ್ಪಟ್ಟವು. ಬೇರೆ ಬೇರೆ ಕಡೆಗಳಿಂದ ಬರಬಹುದಾದ ದೊರೆಗಳಿಗೆ, ಸಾಮಂತರಿಗೆ ಮತ್ತು ವಿಶೇಷ ಆಹ್ವಾನಿತರಿಗೆ ಬಿಡಾರಗಳನ್ನು ವ್ಯವಸ್ಥೆಗೊಳಿಸಲಾಯಿತು. ವಿದ್ವನ್ಮಣಿಗಳು, ಗಮಕಿಗಳು, ಕ್ರೀಡಾಪಟುಗಳು, ಹಾಸ್ಯಗಾರರು, ಜಟ್ಟಿಗಳು, ಕಲಾವತಿಯರು, ಸಂಗೀತಗಾರರು, ನಟರು ಮೊದಲಾದವರನ್ನು ಆಹ್ವಾನಿಸಲಾಗುತ್ತಿತ್ತು. ಇವರ ಊಟೋಪಚಾರಕ್ಕೆ ಪಾಕದಗೃಹ, ಭೋಜನಶಾಲೆ, ದಾಸೋಹದ ಗೃಹಗಳನ್ನು ಹೊಸದಾಗಿ ಕಟ್ಟಲಾಗುತ್ತಿತ್ತು. ವೀರವೈಷ್ಣವರು, ಶ್ರೀ ವೈಷ್ಣವರು, ಮಹಂತರು, ಮಠಾಧಿಪತಿಗಳು, ಜೋಗಿ

ಜಂಗಮರು ಇವರಿಗೂ ಶ್ರೀರಂಗಪಟ್ಟಣದಲ್ಲಿ ವ್ಯವಸ್ಥೆ ಮಾಡಲಾಗುತ್ತಿತ್ತು. ಇಷ್ಟೆಲ್ಲಾ ಏರ್ಪಾಡು ನಡೆದ ಮೇಲೆ ಕಂಠೀರವನು ಸಾಮಂತರಿಗೆ, ದೊರೆಗಳಿಗೆ, ಮಠಾಧಿಪತಿಗಳಿಗೆ ಇನ್ನೂ ಮುಂತಾದ ವರಿಗೆ ಆಹ್ವಾನ ಪತ್ರಿಕೆಗಳನ್ನು ಕಳುಹಿಸಿಕೊಟ್ಟಿದ್ದನು. ಆಮಂತ್ರಣ ಪತ್ರಿಕೆಯನ್ನು ಸ್ವೀಕರಿಸಿದ ಹೊಳೇ ನರಸೀಪುರದ ನಾಯಕ, ಬೇಲೂರು, ಕುಣಿಗಲ್, ಮಾಗಡಿ, ನಂಜರಾಯಪಟ್ಟಣದ ಪಾಳೇಯಗಾರರು, ಬೇಡರ ನಿರುಪಣ್ಣನಾಯಕ ಮತ್ತು ಹನುಮಪ್ಪನಾಯಕನ ಅರಸುಗಳವರ ಹಾಗೂ ಕೊಡಗು, ಮಲೆಯಾಳ, ಕೊಂಕಣಿ ಮತ್ತು ತುಳು ರಾಜ್ಯಗಳನ್ನು ಆಳುತ್ತಿದ್ದ ದೊರೆಗಳು ಉಡುಗೊರೆಗ ಳೊಂದಿಗೆ ಶ್ರೀರಂಗಪಟ್ಟಣಕ್ಕೆ ಬರುತ್ತಿದ್ದರು. ಇವರುಗಳ ಜೊತೆಗೆ ಕಂಠೀರವನ ಪ್ರಭುತ್ವವನ್ನು ಒಪ್ಪಿ ಕೊಂಡ ಅಧೀನಸ್ಥರುಗಳು ಕಪ್ಪಕಾಣಿಕೆಗಳನ್ನು ಹೊತ್ತು ರಾಜಧಾನಿಗೆ ಧಾವಿಸುತ್ತಿದ್ದರು. ಇಕ್ಕೇರಿ, ತಂಜಾವೂರು, ಮಧುರೆ, ಮತ್ತು ಜಂಜಿ ರಾಜರುಗಳು ಅಲ್ಲಿಗೆ ಬರುತ್ತಿದ್ದರು. ಸೂರಿಗಳು, ವಿದ್ವಾಂಸರು, ನಿಯೋಗಿಗಳು, ಪ್ರಸಿದ್ಧಿ ಪುರುಷರು, ಸಿದ್ಧಾಂತಿಗಳು, ಗಾಯಕರು, ಪಾಠಕರು, ನಾಗರೀಕರು, ಶೃಂಗಾರ ಪುರುಷರು ವಿಶೇಷ ಆಹ್ವಾನಿತರಲ್ಲಿ ಸೇರುತ್ತಿದ್ದರು. ನಾನಾ ದೇಶಗಳಿಂದಲೂ ರಾಜ್ಯದ ಮೂಲೆ ಮೂಲೆಗಳಿಂದಲೂ ಜನ ಪ್ರವಾಹದೋಪಾದಿಯಲ್ಲಿ ಬಂದು ಶ್ರೀರಂಗಪಟ್ಟಣದ ವಿವಿಧ ಭಾಗಗಳಲ್ಲಿ ಬಿಡಾರ ಹೂಡುತ್ತಿದ್ದರು.

ಮಹಾನವಮಿಯ ಮೊದಲನೇ ದಿನ ಬ್ರಾಹ್ಮಣರು ದರ್ಬಾರ್‌ಭವನ, ಕುದುರೆ, ಆನೆ ಮತ್ತು ಆಯುಧ ಶಾಲೆಗಳಲ್ಲಿ ಪುಣ್ಯಾರ್ಚನೆ ಹೋಮ ಕಾರ್ಯಗಳನ್ನು ನೆರವೇರಿಸುತ್ತಿದ್ದರು. ಚಾಮುಂಡಿ ಬೆಟ್ಟದ ಮೇಲಿರುವ ದೇವತೆಗೆ ಪೂಜೆ ಸಲ್ಲಿಸುವುದರ ಮೂಲಕ ನವರಾತ್ರಿಯ ಹಬ್ಬವನ್ನು ಉದ್ಘಾಟಿಸ ಲಾಗುತ್ತಿತ್ತು. ಬೆಟ್ಟದ ಚಾಮುಂಡೇಶ್ವರಿಯು ಮೈಸೂರು ಅರಸರ ಕುಲದೇವತೆ ಯಾಗಿದ್ದಳು. ಪೂಜೆ ನಡೆದ ನಂತರ ಬ್ರಾಹ್ಮಣರಿಗೆ ಅನ್ನಸಂತರ್ಪಣೆ ನಡೆಯುತ್ತಿತ್ತು. ಪುರಜನ, ಪರಿಜನ ಹಾಗೂ ನಾನಾ ದೇಶದ ಜನಗಳು, ಮಕ್ಕಳು, ಸ್ತ್ರೀಯರು, ಪುರುಷರು, ವೃದ್ಧರು, ತಮ ತಮಗೆ ಒಪ್ಪುವ ಉಡುಪುಗಳನ್ನು ಧರಿಸಿ ಕಂಠೀರವನ ಒಡ್ಡೋಲಗದ ಕಾರ್ಯಕ್ರಮಗಳನ್ನು ವೀಕ್ಷಿಸಲು ಬಂದು ಅರಮನೆಯಲ್ಲಿ ಸೇರುತ್ತಿದ್ದರು. ಮೊದಲನೆ ಎಂಟು ದಿನಗಳ ಪರ್ಯಂತ ಒಡ್ಡೋಲಗ ನಡೆಯುತ್ತಿತ್ತು.[13] ಮಹಾನವಮಿ ಒಡ್ಡೋಲಗೋತ್ಸವವು ಪ್ರತಿದಿನ ಬೆಳಿಗ್ಗೆ ಮತ್ತು ರಾತ್ರಿ ನಡೆಯುತ್ತಿತ್ತು. ಶುಭಮುಹೂರ್ತದಲ್ಲಿ ರಂಗನಾಥ ಮತ್ತು ಲಕ್ಷ್ಮೀನರಸಿಂಹ ವಿಗ್ರಹಗಳನ್ನು ಮೆರವಣಿಗೆಯಲ್ಲಿ ದರ್ಬಾರ್ ಭವನಕ್ಕೆ ತಂದು ರತ್ನಪೀಠದ ಮೇಲೆ ಇಟ್ಟು ಪೂಜೆ ಮಾಡ ಲಾಗುತ್ತಿತ್ತು. ದಳವಾಯಿ ಲಿಂಗರಾಜಯ್ಯನು ತಕ್ಕ ಉಡುಪನ್ನು ಧರಿಸಿ ಆಸ್ಥಾನಿಕರು, ಮಂತ್ರಿಗಳು,

ಮುಖ್ಯಸ್ಥರು ಹಾಗೂ ಕರಣಿಕರೊಂದಿಗೆ ಎಲ್ಲಾ ಸೈನಿಕ ಗೌರವದೊಡನೆ ಕಂಠೀರವನನ್ನು ಸ್ವಾಗತಿಸಲು ಮುಂದೆ ಹೋಗುತ್ತಿದ್ದನು. ಅಷ್ಟರಲ್ಲಿ ಕಂಠೀರವನು ಪ್ರಾತಃಕಾಲದಲ್ಲಿ ಸ್ನಾನಮಾಡಿ ಯಜ್ಞೋಪವೀತವಂ ಧರಿಸಿಕೊಂಡು ನವರಾತ್ರಿಯ ಉತ್ಸವಾರ್ಥವಾಗಿ ದೇವಸ್ಥಾನಗಳಿಂದ ಬಂದ ಎಣ್ಣೆಯರಿಸಿನಗಳಿಂದ ಮಂಗಳಸ್ನಾನ ಮಾಡಿ ದೀಕ್ಷಾವಸ್ತ್ರವನ್ನುಟ್ಟು ಅರಮನೆಯಲ್ಲಿರುವ ಶ್ರೀ ಚಾಮುಂಡೇಶ್ವರಿ ಅಮ್ಮನವರ ಸನ್ನಿಧಿಯಲ್ಲಿ ಕಂಕಣವನ್ನು ಧರಿಸಿಕೊಂಡು, ಸರ್ವಾಲಂಕಾರ ಭೂಷಿತನಾಗಿ ಪಟ್ಟದ ಕತ್ತಿಯನ್ನು ಹಿಡಿದು ಸಿದ್ಧವಾಗುತ್ತಿದ್ದನು. ವೆಂಕಟಪತಿ ಜೆಟ್ಟಿ ಎಂಬುವವನು ಕಂಠೀರವನನ್ನು ಬಹು ವಿನಯಪೂರ್ವಕವಾಗಿ ಆಹ್ವಾನಿಸಿ, ಮಾರ್ಗದರ್ಶನ ಮಾಡುತ್ತಿದ್ದನು. ದೊರೆಯು ಪಲ್ಲಕ್ಕಿಯಲ್ಲಿ ಕುಳಿತು ಮುತ್ತಿನ ಛತ್ರದ ನೆರಳಿನಲ್ಲಿ ಸಂಗೀತಗಾರರೊಂದಿಗೆ ಚಕ್ರ, ಶಂಖ, ಧ್ವಜ, ಚಾರಿ ಮೊದಲಾದ ಅರಮನೆಯ ಗೌರವಗಳಿಂದ ಪರಿವೇಷ್ಟಿತವಾಗಿ ದರ್ಬಾರ್ ಅಂಗಳಕ್ಕೆ ನಿಧಾನವಾಗಿ ಚಲಿಸುತ್ತಿದ್ದನು. ಪ್ರೇಕ್ಷಕರಿಗೆ ಈ ದೃಶ್ಯ ಮನಮೋಹಕವಾಗಿರುತ್ತಿತ್ತು. ದರ್ಬಾರ್ ಅಂಗಳಕ್ಕೆ ಬಂದ ತಕ್ಷಣ ಕಂಠೀರವನು ಪಲ್ಲಕ್ಕಿಯಿಂದ ಇಳಿಯುತ್ತಿದ್ದನು. ಅಷ್ಟರಲ್ಲಿ ದಳವಾಯಿ ಭಕ್ತಿಗೌರವಗಳಿಂದ ದೊರೆಗೆ ನಮಿಸಿ ತನ್ನ ಸ್ವಸ್ಥಾನಕ್ಕೆ ತೆರಳುತ್ತಿದ್ದನು. ರಂಗನಾಥ ನರಸಿಂಹ ವಿಗ್ರಹಗಳಿಗೆ ಪೂಜೆಯನ್ನು ಸಲ್ಲಿಸಿ ಅನಂತರ ಕಂಠೀರವನು "ನವರತ್ನದ ಗದ್ದುಗೆ"ಯಲ್ಲಿ ಮಂಡಿಸುತ್ತಿದ್ದನು.

ಸಿಂಹಾಸನಾರೋಹಣವನ್ನು ಮಾಡಿದ ಸಮಯದಲ್ಲಿ ಅರಮನೆಯ ಮುಂದಿರುವ ಕೆಮ್ಮಣ್ಣು ಮಟ್ಟಿಯ ಸುತ್ತಲೂ ಸಾಲುಸಾಲಾಗಿ ನಿಂತಿರುವ ಆನೆ, ಕುದುರೆ, ಒಂಟೆ, ಕಾಲಾಳುಗಳಿಂದಲೂ, ತಮ್ಮ ಭುಜಪರಾಕ್ರಮದಿಂದ ಸಂಪಾದಿಸಿ "ಹನುಮಧ್ವಜ, ಗರುಡಧ್ವಜ, ಮಕರಟೆಕ್ಕೆ, ಸತ್ತಿಗೆ, ಸೂರೆಪಾನ, ಚಾರಿ ಮುಂತಾದ ಬಿರುದು ಬಾವಲಿಗಳಿಂದಲೂ ಗಾನ ನರ್ತನಗಳಲ್ಲಿ ಕುಶಲರಾದ ವೇಶ್ಯಾಸ್ತ್ರೀಯರುಗಳಿಂದಲೂ ಮತ್ತು "ಶ್ರೀ ಮತ್ಪಶ್ಚಿಮ ರಂಗನಾಥ ಪಾದಾರವಿಂದ ಬಂಭರಾಯಿತ ಚಿತ್ತ" ಮತ್ತು "ರಿಪುಷಂಡ ಖಂಡನೋದ್ದಂಡದೋರ್ದಂಡ, ಅಂಗನಾಜನ ಕುಸುಮ ಕೋದಂಡ, ಬಾಹುದಂಡ ಧೃತ ವಿವಿಧಾಯುಧ ಪ್ರಕಾಂಡ, ಬಿರುದೆಂಬರಗಂಡ, ರಾಜಾಧಿರಾಜ" ಎಂದು ಪರಿಪರಿಯಾಗಿ ಹೊಗಳುತ್ತಲಿರುವ ಭಟರುಗಳಿಂದಲೂ, ವೀಣಾವೇಣು, ಮೃದಂಗ, ಕಹಳಾ, ಭೇರಿ ಮೊದಲಾದ ವಾದ್ಯಗಳ ಧ್ವನಿಗಳಿಂದಲೂ ಆಸ್ಥಾನವು ಮೊಳಗುತ್ತಿರಲು ಪುರೋಹಿತರು ಮೊದಲಾದ ಬ್ರಾಹ್ಮಣರುಗಳಿಂದ ಕಲಶೋಧಕ ಮಾರ್ಜನೆಯನ್ನು ಮಾಡಿಸಿಕೊಂಡು, ದೇವಸ್ಥಾನಗಳಿಂದ ಬಂದ ಪ್ರಸಾದವನ್ನೂ ಸಾಮಂತರು ಮುಂತಾದವರು ಒಪ್ಪಿಸಿದ ಉಡುಗೊರೆಗಳನ್ನು ಸ್ವೀಕರಿಸುತ್ತಿದ್ದನು. ಮತ್ತೊಂದು ಕಡೆ ಅರಮನೆ ಅಧಿಕಾರಿಗಳು ದರ್ಬಾರ್ ಅಂಗಳದಲ್ಲಿ ಓಡಾಡುತ್ತಾ ಬಂದ ಆಹ್ವಾನಿತರನ್ನು ಅವರ ಸ್ಥಾನ

ಮಾನಗಳಿಗೆ ತಕ್ಕಂತೆ ಮೀಸಲಿರಿಸಿದ ಪೀಠಗಳಲ್ಲಿ ಕೂರಿಸುತ್ತಾ ತಾಂಬೂಲ, ಹೂವಿನಹಾರ ಮತ್ತು ಉಡುಗೊರೆಗಳನ್ನು ನೀಡುತ್ತಾ ಸನ್ಮಾನಿಸುತ್ತಿದ್ದರು. ಮನ್ನೆಯ ಮಾಂಡಲೀಕರು, ರಾಯರಾವುತರು, ಸೂಳೆಯರು, ಪಾದಕರು, ಛಪ್ಪನ್ನ ದೇಶದ ಜೋದ್ಯ ವಿದ್ಯಾಧಿಕಾರಿಗಳು, ನೋಟಕಜನ ಎಲ್ಲರೂ ದರ್ಬಾರ್ ಅಂಗಳದಲ್ಲಿ ಸಾಲುಸಾಲಾಗಿ ನಿಂತು ಶಿಸ್ತಿನಿಂದ ನಡೆದುಕೊಳ್ಳುತ್ತಿದ್ದರು.[14] ನವರಾತ್ರಿಯಲ್ಲಿ ಸಿಂಹಾಸನರೂಢನಾಗಿ ಒಡ್ಡೋಲಗ ತೆಗೆದುಕೊಳ್ಳುತ್ತಿರುವ ವೇಳೆಯಲ್ಲಿ ಸಜ್ಜೆಯ ಮೆಲೆ ದಳವಾಯಿ, ಅರಸುಗಳು, ಪಾಳೆಯಗಾರರು, ಅಧಿಕಾರಸ್ಥರು ಮುಂತಾದ ಸಕಲ ಜನರೂ ಕೈಕಟ್ಟಿಕೊಂಡು ನಿಂತಿರ ಬೇಕೆಂದು 1646ನೆಯ ಅಕ್ಟೋಬರ್ 4ನೆಯ ತಾರೀಖಿನ ನವರಾತ್ರಿಯಲ್ಲಿಯೇ ಕಟ್ಟುಪಾಡು ಮಾಡಿದ್ದನು.[15] ದೊರೆಗಳು ಪ್ರಜೆಗಳಿಂದ ಬಂದ ಕಾಣಿಕೆಗಳನ್ನು ಸ್ವೀಕರಿಸಿ, ಅವರವರ ಸ್ಥಾನಮಾನ ಗಳನ್ನರಿತು ಹೂವಿನಹಾರ, ತಾಂಬೂಲ ಕೊಡಿಸಿ, ಅವರುಗಳಿಂದ ಪ್ರಣಾಮಗಳನ್ನು ಸ್ವೀಕರಿಸಿ ಅಪ್ಪಣೆಯನ್ನು ಕೊಟ್ಟು ಕಳುಹಿಸುತ್ತಿದ್ದರು. ಆ ಬಳಿಕ ಛತ್ರ 1, ಚಾಮರ 2, ಬೀಸಣಿಗೆ 1, ಗುಮಾಗರಿ 2, ಕಾಳಂಜಿ 1, ಕನ್ನಡಿ 1, ಚಂಬಿನ ಚೀಲ 1, ನಶ್ಯದ ಡಬ್ಬಿ 1, ವೀಳೆಯದ ಪೆಟ್ಟಿಗೆ 1, ಎಡಬಲದ ಸೇವೆ 2, ಹಾವುಗ 1, ಇವುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಹಿಡಿದುಕೊಂಡಿರುವ ಚೇಟಿಕಾ ಸ್ತ್ರೀಯರುಗಳಿಂದ ಆಯಾ ಸಮಯಗಳಲ್ಲಿ ಸೇವೆಯನ್ನು ತೆಗೆದುಕೊಳ್ಳುತ್ತಾ ಸಿಂಹಾಸನ ದಲ್ಲಿ ಮುಹೂರ್ತ ಮಾಡಿರುವ ದೊರೆಗಳವರನ್ನು ನೋಡಬೇಕೆಂಬ ಇಚ್ಛೆಯಿಂದ ಅಂತಃಪುರದ ಸ್ತ್ರೀ ಜನರೆಲ್ಲರೂ ತಮ್ಮ ತಮ್ಮ ಮರ್ಯಾದೆಗನುಸಾರವಾಗಿ ಸಿಂಹಾಸನಕ್ಕೆ ನಮಸ್ಕರಿಸಿ ಅಂತಃಪುರಕ್ಕೆ ತೆರಳುತ್ತಿದ್ದರು. ಇಷ್ಟೆಲ್ಲಾ ಆದ ಮೇಲೆ ದೊರೆಗಳು ಸಿಂಹಾಸನದಿಂದ ಇಳಿಯುತ್ತಿದ್ದರು. ಗೋವಿಂದ ವೈದ್ಯನು "ಆ ಸಮಯದ ಜಟ್ಟಿಗಳು ಜೋಡು ಜೋಡಲಿ ರೋಷಾವೇಶದೊಳಾಗ ಘೋಷಿಸಿ ನೆಗೆದು ಭುಜ ಸ್ಫೋಟನೆಗೈದು ವಾಸಿಪಂಥದ ನಿಂದರೊಡನೆ ಕರಕಮಲದ ವಜ್ರಮಲಷ್ಟಿ ಪುಸ್ತಕ ದೊಳು ಮೆರೆವ ಕುಂಕುಮರಜದಿಂದ ಕೊರಳ ಪೂಮೇಲೆ ಕಸ್ತುರಿ ಲೇಪನದ ಮಲ್ಲಗುರುವಣಿಸಿದ ರಾಹವಕೆ; ಚರಣಹತಿಗೆ ಬಿರಿಯಲು ಭೂಮಿ ಭೂಯೆಂದುರುಗಬಂಧದಲಿ ತಕ್ಕೈಸಿ ಪರಿಪರಿ ಕೌಶಲಗಳ ಮುಷ್ಟಿಗಾಯದ ನೆರೆಗಲಿ ಮಲ್ಲರೊಪ್ಪಿದರು. ಬಿಗಿವ ಬಿಡಿಸಿಕೊಳ್ಳೆ, ತೆಗೆವ, ತವಕಿಸುವ, ನಗೆವ, ನಿಗುರಿಯೊಳಸರಿವ, ಲಗಡಿನಂತೆಗರಿ ಲಾಗಿಸುವ, ಹೋರಾಟದ ಉಗಡ ಮಲ್ಲರುಗಳೊ ಪ್ಪಿದರು. ಇಂತಪ್ಪ ಮಲ್ಲರು ನೂರಾರು ಜೋಡಿಯಲಿ ಪಂತದೊಳಗೆ ಕಾಡುತಿರಲು, ಕಂತುಸನ್ನಿಭ ಕಂಠೀರವೇಶ್ವರ ಬಲು ಸಂತೋಷ ತಾಳಿದನು. ಸೋಲು ಗೆಲುವುಗಳನ್ನರಿತು ಮಲ್ಲರುಗಳ ಕಾಳಗ ವನ್ನು ಬೇಗ ಬಿಡಿಸಿ ವೀಳೆಯ ವುಡುಗೆರೆಗೊಡುತಿರೆ, ಡೊಂಬರ ಮೇಳದಾಟಗಳೊಪ್ಪಿದವು. ಲಘು ಲಾಗು ಲಂಘನೆಯಾಳುಗಳ ಮಿಳಿಯಲಿ ಯಗಣಿತರಹ ಡೊಂಬರುಗಳು ಬಗೆಬಗೆಯಾಟದ

ತೋರಿಯಾಸ್ಥಾನವಮಿಗೆ ಮೆಚ್ಚಿಸಿದ ರೇವೇಳವ, ತಗರ ಕಾಳಗ, ಮದಕರಿಗಳ ಹೋರಾಟ, ವಿಗಡದ ಪುಲಿಕರಡಿಗಳ ಬಿಗಿನೇಣ ಪರಿದು ಕಾದುವ ವೀರರ ಮೊತ್ತ ಸೊಗಸ ಬೀರಿದು ದೋಲಗದ" ಎಂದು ಒಡ್ಡೋಲಗದ ಬೆಳಗಿನ ಕಾರ್ಯಕ್ರಮಗಳನ್ನು ವಿವರಿಸುತ್ತಾನೆ.[16]

ರಾತ್ರಿಯ ಮಹಾನವಮಿಯ ಒಡ್ಡೋಲಗೋತ್ಸವವು ಮತ್ತಷ್ಟು ವೈಭವೋಪೇತವಾಗಿರುತ್ತಿತ್ತು. ದೊರೆಗಳು ಸಿಂಹಾಸನಾರೋಹಣವನ್ನು ಮಾಡಿದ ಮೇಲೆ ಕಾರ್ಯಕ್ರಮ ಆರಂಭವಾಗುತ್ತಿತ್ತು. ಇಡೀ ಸಭಾಂಗಣವು ದೀಪಕಾಂತಿ ಮತ್ತು ದೀವಟಿಕೆಗಳ ಬೆಳಕಿನಿಂದ ಪ್ರಜ್ವಲಿಸುತ್ತಿತ್ತು. ನಾಟ್ಯ, ಕೋಲಾಟ, ಇಂದ್ರಜಾಲ, ಬಯಿರೋಪದ ಆಟಗಳು, ಹಾಸ್ಯ, ರಸಮಂಜರಿಗಳು, ಭಾಗವತರ ವಿಷ್ಣುವಿನ ದಶಾವತಾರ ದೃಶ್ಯಗಳೂ ಈ ಕಾರ್ಯಕ್ರಮದಲ್ಲಿ ಸೇರುತ್ತಿದ್ದವು. ಸಂಗೀತಗಾರರು, ಕೊಳಲನ್ನು ಊದುವವರು, ಕಾವ್ಯವನ್ನು ರಚಿಸಿ ರಾಗವಾಗಿ ಹಾಡುತ್ತಿದ್ದವರು, ಒಡ್ಡೋಲಗದ ಶೋಭೆಯನ್ನು ಮತ್ತಷ್ಟು ಹೆಚ್ಚಿಸುತ್ತಿದ್ದರು. ಅರಸುಗಳು, ಪಾಳೆಯಗಾರರು ಸೆಜ್ಜೆಯಿಂದ ಕೆಳಗೆ ಇಳಿದು ಕೈಯಲ್ಲಿ ಕತ್ತಿಗಳನ್ನು ಹಿಡಿದುಕೊಂಡು ಕೆಮ್ಮಣ್ಣುಮಟ್ಟಿಯಲ್ಲಿ ನಿಂತು ನಮಸ್ಕರಿಸುತ್ತಿದ್ದರು. ಕರಣಿಕರು ತಲೆ ಬಾಗಿ ನಮಿಸುತ್ತಿದ್ದರು. ಸೇವಕ ಜನರು ಕಟ್ಟಳೆಯ ಮೇರೆಗೆ ಪ್ರಣಾಮವನ್ನು ಮಾಡಿ ತಮ್ಮ ತಮ್ಮ ಊಳಿಗವನ್ನು ಹಿಡಿದುಕೊಂಡು ನಿಬಂಧನೆಯ ಸ್ಥಳಗಳಲ್ಲಿ ನಿಂತುಕೊಳ್ಳುತ್ತಿದ್ದರು. ಜಟ್ಟಿಗಳು ತಾವು ನೀಡಿದ ಪ್ರದರ್ಶನಕ್ಕೆ ಯೋಗ್ಯ ತಾನು ಸಾರ ಉಡುಗೊರೆಗಳನ್ನು ಪಡೆಯುತ್ತಿದ್ದರು. ಕಲಾವರೇಣ್ಯರು, ಐಂದ್ರಜಾಲಕರು, ದೊಂಬರು, ಪೆಲ್‌ವಾನರು (ಷಹಲ್ವಾನರು) ಮರ್ಯಾದೆ ಸವೀಕರಿಸಿ ದೊರೆಗೆ ನಮಸ್ಕರಿಸಿ ತಮ್ಮ ತಮ್ಮ ಸ್ಥಳಗಳಲ್ಲಿ ನಿಲ್ಲುತ್ತಿದ್ದರು. ಪಟ್ಟದಾನೆ, ಕುದುರೆಗಳು ಕೆಮ್ಮಣ್ಣುಮಟ್ಟಿಯಲ್ಲಿ ನಿಂತು ದೊರೆಗಳಿಗೆ ಪ್ರಣಾಮವನ್ನು ಮಾಡುತ್ತಿದ್ದವು. ದೊರೆಗಳು ಕೆಮ್ಮಣ್ಣುಮಟ್ಟಿಯಲ್ಲಿ ಹತ್ತಿಸಿದ ಆಶ್ಚರ್ಯಕರವಾದ ಹಗಲಬತ್ತಿ, ನಕ್ಷತ್ರಬಾಣ, ಹೂಬಾಣ, ಚಕ್ರಬಾಣ, ಬಿರುಸುಬಾಣ, ಸೂತ್ರಗಂಬ ಮುಂತಾದವುಗಳನ್ನು ನೋಡುತ್ತಾ ಜನರುಗಳಿಗೆ ಹೂವಿನ ಹಾರ ವೀಳಯಗಳನ್ನು ಕೊಡಿಸಿ, ಅವರುಗಳಿಂದ ಪ್ರಣಾಮಗಳನ್ನು ತೆಗೆದುಕೊಂಡು ಸಿಂಹಾಸನದಿಂದ ಇಳಿಯುವ ಸಮಯದಲ್ಲಿ ಐದು ಕುಶಾಲ್ ಫಿರಂಗಿಗಳನ್ನು ಹಾರಿಸಿದ ಮೇಲೆ, ಅಂತಃಪುರಕ್ಕೆ ತೆರಳಿ, ಅಲ್ಲಿ ಚೇಟಕಾ ಸ್ತ್ರೀಯರುಗಳಿಂದ ಹಸ್ತಲಾಘವ ಮುಂತಾದ ಸೇವೆಗಳನ್ನು ಅಂಗೀಕರಿಸುತ್ತಿರುವಾಗ ತಮ್ಮ ಪತ್ನಿಯರು ಮೊದಲಾದ ಅಂತಃಪುರದ ಸ್ತ್ರೀಯರು ಬಂದು ಅಡಿದಾವರೆಗಳಿಗೆ ಪ್ರಣಾಮ ಮಾಡುವುದನ್ನು ಅವಲೋಕಿಸುತ್ತಿರುವ ವೇಳೆಯಲ್ಲಿ, ದೊರೆಗಳಿಗೆ ತಾಗಿರಬಹುದಾದ ಜನರ ದೃಷ್ಟಿ ದೋಷವನ್ನು ಪರಿಹರಿಸಲೋಸುವ ಬಗೆಬಗೆಯ ಅನ್ನದ, ನವರತ್ನದ, ಆರತಿಗಳನ್ನು ಬೆಳಗಿ, ನಂತರ

ಅಲಂಕಾರವನ್ನು ತೆಗೆದು, ಫಲಹಾರವನ್ನು ಮಾಡಿ, ಸುಖವಾಗಿ ಪವಡಿಸಲು ವ್ಯವಸ್ಥೆ ಮಾಡುತ್ತಿದ್ದರು. ದೊರೆಯು ರಾತ್ರಿಯ ಉತ್ಸವವನ್ನು ಹೇಗೆ ಮುಕ್ತಾಯಗೊಳಿಸುತ್ತಿದ್ದನು ಎಂಬುದನ್ನು ಕುರಿತು ಗೋವಿಂದ ವೈದ್ಯನು" ಹರಿಗೆ ವಂದಿಸಿ ತೀರ್ಥ ಪ್ರಸಾದವಕೊಂಡು, ಪರಮೋತ್ಸವ ಮಿಗಲಂದು ದೊರೆರಾಯ ಸರ್ವ ಸಂಭ್ರಮದೊಳಗಂತಃಪುರಕೈದನೇ ವೇಳೆವ" ಎಂದು ವಿವರಿಸುತ್ತಾನೆ.[17]

ಒಂಭತ್ತನೆಯ ದಿವಸ ಪ್ರಾತಃಕಾಲದಲ್ಲಿ ದೊರೆಯು ಸ್ನಾನ ಸಂಧ್ಯಾವಂದನೆಗಳನ್ನು ನೆರವೇರಿಸಿ ಅರಮನೆಯಲ್ಲಿ ಪಟ್ಟದ ಕತ್ತಿಯನ್ನು ಪೂಜಿಸಿ ಅನಂತರ ಅದನ್ನು ಕಾವೇರಿಯ ಉತ್ತರ ಪಾರ್ಶ್ವದಲ್ಲಿ ಗೌರಿಯ ಕಡುವಿನಲ್ಲಿ ಹಾಕಿರುವ ಚಪ್ಪರಕ್ಕೆ ಕಳುಹಿಸುತ್ತಿದ್ದನು. ಅಲ್ಲಿ ಪಟ್ಟದ ಕತ್ತಿಯನ್ನು ಮಡಿ ಹಾಸಿಗೆಯ ಮೇಲೆ ಇರಿಸಿ ಅರಸುಗಳಲ್ಲಿ ಒಬ್ಬರು ಮಡಿಯನ್ನುಟ್ಟುಕೊಂಡು ಬಂದು ಆಯುಧಕ್ಕೆ ಎಣ್ಣೆಶಾಸ್ತ್ರ ಮುಂತಾದ ಶುಭಕಾರ್ಯಗಳನ್ನು ಮಾಡಿ ಆನೆ ಕುದುರೆಗಳನ್ನು ಕಳಸ ಕನ್ನಡಿಗಳನ್ನು ಪೂಜಿಸಿದ ನಂತರ ಅಲ್ಲಿಗೆ ಬಂದ ಜನರು ಮುಜುರೆಯನ್ನು ಮಾಡುತ್ತಿದ್ದರು. ಅನಂತರ ಆ ಜನರಿಗೆ ಹೂವಿನಹಾರ ಮತ್ತು ವೀಳೆಯ ಕೊಟ್ಟು ಮಹಾರಾಜನು ಮರ್ಯಾದೆಯಿಂದ ಅರಮನೆಗೆ ಬರುವ ಸಮಯದಲ್ಲಿ, ಕಉಲದೇವತೆಯಾದ ಅಮಲ ದೇವತೆಯನ್ನು ಪೂಜಾರಿಯ ಮನೆಯಿಂದ ಹೊರತಂದು, ಆಯುಧದ ಹಿಂದುಗಡೆಯಲ್ಲಿಯೇ ಬಿಜಯ ಮಾಡಿಸಿಕೊಂಡು ಬಂದು, ಅರಮನೆಯ ಸೌಂದರ್ಯ ವಿಲಾಸದ ತೊಟ್ಟಿಯ ಹಜಾರ ಪುಷ್ಪ ಮಂಟಪದಲ್ಲಿರಿಸಿ, ಆಯುಧಕ್ಕೂ, ಆನೆ ಕುದುರೆಗಳಿಗೂ ಪಾರಾಂಗನೆಯರು ನವರತ್ನದ ಆರತಿಯನ್ನು ಎತ್ತುತ್ತಿದ್ದರು. ಕಂಠೀರವನು ಪೂರ್ವ ಸಂಪ್ರದಾಯದ ಮೇರೆಗೆ ಸರಸ್ವತಿ ಪೂಜೆಯನ್ನು ಮಾಡಿ, ಆ ವೇಳೆಯಲ್ಲಿಯೇ ಆಯುಧಗಳನ್ನು ಪೂಜಿಸುತ್ತಿದ್ದನು. ಅಶ್ವಪೂಜೆ, ಗಜಪೂಜೆ, ಅಂದೋಳಿಕಾದಿ ಪೂಜೆಗಳು ಆಮೇಲೆ ನೆರವೇರುತ್ತಿದ್ದವು. ಅದೇ ಸಮಯದಲ್ಲಿ ಬೆಟ್ಟದ ತಮ್ಮ ಕುಲದೇವತೆಯಾದ ಚಾಮುಂಡೇಶ್ವರಿ ಅಮ್ಮನವರ ಸನ್ನಿಧಿಯಲ್ಲಿ ಶತಚಂಡೀಜಪ ಜರುಗುವಂತೆ ನಿಬಂಧ ಮಾಡಿದ್ದನು. ಆ ದಿನ ರಾತ್ರಿಯಲ್ಲಿ ಕಟ್ಟಳೆಯ ಮೇರೆಗೆ ಓಲಗವು ಬೆಳೆದ ನಂತರ ಆಯುಧಕ್ಕೆ ಪೂಜೆ ನೆರವೇರಿಸಿ ಕಂಕಣ ವಿಸರ್ಜನೆ ಮಾಡಿ, ಶಿಬಾಸರವನ್ನೂ, ದಫ್ತರವನ್ನೂ ಸಹ ಪೂಜಿಸಿ, ನೇಮದಿಂದ ಅನೇಕ ಶಾಕಪಾಕ ಭಕ್ಷ್ಯ ಭೋಜ್ಯಾದಿಗಳಿಂದ ಅಮಲದೇವತೆಯನ್ನು ಆರಾಧಿಸುತ್ತಿದ್ದನು.[18]

ವಿಜಯದಶಮಿ (10ನೇ ದಿನ) ದಿವಸದಲ್ಲಿ ಕಂಠೀರವನು ಪ್ರಾತಃಕಾಲದಲ್ಲಿ ಸ್ನಾನ, ಸಂಧ್ಯಾವಂದನೆಗಳನ್ನು ನೆರವೇರಿಸಿಕೊಂಡು ಸರಸ್ವತಿಯ ಉತ್ತರ ಪೂಜೆಯನ್ನು ಮಾಡಿ, ಸರ್ವಾಲಂಕಾರ ಭೂಷಿತನಾಗಿ ಆಯುಧವನ್ನು ಪೂಜಿಸಿದ್ದ ಹಜಾರಕ್ಕೆ ಬಂದು ಆಯುಧಕ್ಕೆ ಉತ್ತರ ಪೂಜೆಯನ್ನು ಮಾಡಿದ ಮೇಲೆ, ಪೂರ್ವದಂತೆ ಓಲಗ ಮುಜರೆ ನಡೆಯುವ ಸಮಯದಲ್ಲಿ ಆಯುಧದ ಎದುರಿಗೆ ರಕ್ತ ಬೀಳುವಂತೆ ವಜ್ರಮುಷ್ಟಿಯ ಜಟ್ಟಿ ಕಾಳಗವನ್ನು ಮಾಡಿಸಿ ಆಯುಧಕ್ಕೆ ಬಲಿರೂಪವಾಗಿ ಕಾಳಿಕಾ ಪುರುಲೋಕ್ತ ಪ್ರಕಾರ ಕೂಷ್ಮಾಂಡ ಛೇದನವನ್ನು ಎಂದರೆ, ಕುಂಬಳಕಾಯಿ ಕತ್ತರಿಸುವುದನ್ನು ದೊರೆಯೆ ಮಾಡುತ್ತಿದ್ದನು. ಇದೇ ದಿನ ದೊರೆಯ ಬೀದಿ ಮೆರವಣಿಗೆ ನಡೆಯುತ್ತಿತ್ತು. ಶಮೀಪೂಜೆ ಸಾಯಂಕಾಲ ನಡೆಯುತ್ತಿತ್ತು. ಪಟ್ಟಣದ ಹೊರಭಾಗದಲ್ಲಿ ಪೂರ್ವಕ್ಕೆ ಇದ್ದ ಶಮೀ ಮಂಟಪವನ್ನು ಕೊತವಾಲ ಲಿಂಗೇಗೌಡನು ಬಹು ಎಚ್ಚರಿಕೆಯಿಂದ ಶೃಂಗರಿಸುತ್ತಿದ್ದನು. ಅರಮನೆಯ ಹೆಬ್ಬಾಗಿಲಿನಿಂದ ಶಮೀ (ಬನ್ನಿ) ಮಂಟಪದವರೆಗೆ ಮೂರು ಮೈಲಿ ದೂರವಿದ್ದ ಬೀದಿಯನ್ನು ಸುಂದರಗೊಳಿಸಲಾಗುತ್ತಿತ್ತು. ಇಡೀ ಬೀದಿ ತಳಿರುತೋರಣ ಮತ್ತು ಮಂಟಪಗಳಿಂದ ಕಂಗೊಳಿಸುತ್ತಿತ್ತು. ಬೀದಿಯ ಇಕ್ಕೆಲಗಳಲ್ಲೂ ಜಂಬೂಸವಾರಿ ಹೊರಡುವುದಕ್ಕೆ ಮುನ್ನ ಪುರ ನಿವಾಸಿಗಳೂ, ನೆರೆಹೊರೆಯ ಹಳ್ಳಿಪಟ್ಟಣಗಳಿಂದ ಬಂದ ಜನರು ಕಿಕ್ಕಿರಿದು ತುಂಬಿರುತ್ತಿದ್ದರು. ಜಂಭೂ ಸವಾರಿಯ ವೈಭವವನ್ನು ನೋಡಲು ದಕ್ಷಿಣ ಭಾರತದ ವಿವಿಧ ಭಾಗಗಳಿಂದ ಪ್ರಮುಖ ವ್ಯಕ್ತಿಗಳು ಶ್ರೀರಂಗಪಟ್ಟಣಕ್ಕೆ ಆಗಮಿಸುತ್ತಿದ್ದರು. ಸರಿಯಾದ ಮುಹೂರ್ತದಲ್ಲಿ ಮೆರವಣಿಗೆ ಆರಂಭವಾಗುತ್ತಿತ್ತು. ಉತ್ತರ ದಿಕ್ಕಿನಲ್ಲಿದ್ದ ಬನ್ನಿಯ ಮಂಟಪಕ್ಕೆ ಪಟ್ಟದ ಆನೆ, ಪಟ್ಟದ ಹಸು, ಪಟ್ಟದ ಕುದುರೆಗಳ ಸಹಿತವಾಗಿ ಪೂರ್ವದಂತೆ ರಾಜಮರ್ಯಾದೆಯಿಂದೊಡಗೂಡಿ ಮೆರವಣಿಗೆಯು ನಿಧಾನವಾಗಿ ಚಲಿಸುತ್ತಿತ್ತು. ಕಂಠೀರವನು ಅಲಂಕಾರ ಭೂಷಿತನಾಗಿ ಕುದುರೆಯನ್ನೇರಿ ದಂಡು ದಾಳಿಗಳ ಸಹಿತವಾಗಿ ಮಂಗಳವಾದ್ಯಗಳು ಮೊಳಗುತ್ತಿರುವ ಕಾಲದಲ್ಲಿ ಮೆರವಣಿಗೆ ಹೊರಡುತ್ತಿದ್ದನು. ದಳವಾಯಿಗಳು, ಮಂತ್ರಿಗಳು, ಕರಣಿಕರು, ಆಸ್ಥಾನಿಕರು, ಸಾಮಂತರು, ಪುರ ಪ್ರಮುಖರು ಎಲ್ಲರೂ ಈ ಜಂಬೂಸವಾರಿಯ ಮೆರವಣಿಗೆಯಲ್ಲಿ ಪಾಲ್ಗೊಳ್ಳುತ್ತಿದ್ದರು.[19] ಇದರಲ್ಲಿ ಅರಸೊತ್ತಿಗೆಯ ಲಾಂಛನಗಳನ್ನು ಕೊಂಡೊಯ್ಯಲಾಗುತ್ತಿತ್ತು. ಮುತ್ತಿನ ಛತ್ರ, ಮಕರ ಧ್ವಜ, ಇನ್ನೂ ಮುಂತಾದ ವಸ್ತುಗಳನ್ನು ಕೊಂಡೊಯ್ಯಲಾಗುತ್ತಿತ್ತು. ಊಳಿಗದವರು ಕೈಯಲ್ಲಿ ಛತ್ರ ಚಾಮರಗಳನ್ನು ಹಿಡಿದು ಮುಂದೆ ಸಾಗುತ್ತಿದ್ದರು. ಅವರು ವರ್ಣರಂಜಿತವಾದ ಉಡುಪುಗಳನ್ನು ಧರಿಸುತ್ತಿದ್ದರು. ಅರಮನೆಯಲ್ಲಿದ್ದ ವಾದ್ಯಗಳೆಲ್ಲವನ್ನೂ ನುಡಿಸುತ್ತಾ ವಾದ್ಯ ವೃಂದದವರು ಶಿಸ್ತಿನಿಂದ ನಡೆಯುತ್ತಿದ್ದರು.

ಅಶ್ವಪಡೆ. ಗಜಪಡೆ, ಕಾಲ್ದಳ, ಅರಸೊತ್ತಿಗೆಯ ವಿವಿಧ ಲಾಂಛನಗಳು ಇಡೀ ಬೀದಿಯನ್ನು ಅಲಂಕರಿಸಿ ನೋಡುವವರ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತಿದ್ದವು.

ಶಮೀ ಮಂಟಪ ದೃಶ್ಯ ಇನ್ನೂ ಅಮೋಘವಾದದ್ದು. ಕಣ್‌ಮನಗಳನ್ನು ರಂಜಿಸುವಂತಹ ದೃಶ್ಯ. ಅಲ್ಲಿಗೆ ವ್ಯಾಘ್ರ, ವರಾಹ, ಭಲ್ಲೂಕ ಮುಂತಾದ ಅನೇಕ ಅರಣ್ಯ ಮೃಗಗಳನ್ನು ಹಿಡಿದು ತರಿಸಿ ವಿನೋದದಿಂದ ಬೇಟೆಯಾಡುತ್ತಿದ್ದರು. ಪಟ್ಟದ ಆನೆಯ ಮೇಲೆ ಕುಳಿತು ಸವಾರಿ ಮಾಡುತ್ತಿದ್ದನು. ಈ ಸಂದರ್ಭದಲ್ಲಿ ಟಗರು ಕಾಳಗ, ಮಲ್ಲರ ಕಾಳಗ ನಡೆಯುತ್ತಿದ್ದವು. ಶಮೀ ವೃಕ್ಷದ ಸಮೀಪಕ್ಕೆ ಬಂದು ಶಮೀ ವೃಕ್ಷದ ಪೂಜೆ ಮಾಡಿಸಿ ಪ್ರಸಾದವನ್ನು ಸ್ವೀಕರಿಸಿ ಸಾಯಂಕಾಲವಾದ ಬಳಿಕ ದೀವಟಿಗೆ ಸಲಾಮ್ ಮುಂತಾದ ಮರ್ಯಾದೆಗಳನ್ನು ಕಂಠೀರವನು ಅಂಗೀಕರಿಸುತ್ತಿದ್ದನು. ಇದೇ ಪರಿಯಾಗಿ ಆಯುಧ ಗಜಾಶ್ವಗಳಿಗೂ ದೀವಟಿಗೆ ಸಲಾಮ್‌ಗಳನ್ನು ಮಾಡಿಸಿ ಅವುಗಳನ್ನು ತಮ್ಮ ಸವಾರಿಯ ಹಿಂದುಗಡೆಯಲ್ಲಿಯೇ ವಿಜಯ ಮಾಡಿಕೊಂಡು ಬರುವಂತೆ ಅಪ್ಪಣೆಯನ್ನು ಮಾಡಿ ಅತ್ಯಂತ ಸಂಭ್ರಮದಿಂದ ಅರಮನೆಗೆ ಹಿಂತಿರುಗುತ್ತಿದ್ದನು. ಶಮೀ ಮಂಟಪದಿಂದ ಅರಮನೆಗೆ ಹಿಂತಿರುಗುವಾಗ ಪಟ್ಟದಾನೆಯ ಮೇಲೆ ಕಂಠೀರವನು ಕುಳಿತು ಲೆಕ್ಕವಿಲ್ಲದ ದೀವಟಿಗಳ ಬೆಳಕಿನಲ್ಲಿ ಬರುತ್ತಿದ್ದನು. ದೊರೆಯು ಅರಮನೆಯ ದೊಡ್ಡ ಹಜಾರದಲ್ಲಿ ಅತ್ಯುನ್ನತವಾದ ಭದ್ರಾಸನದಲ್ಲಿ ಕುಳಿತು ಸಿಂಹಾಸನರೋಹಣ ಕಾಲದಲ್ಲಿ ನಡೆದಂತೆ ನಜರು ಮುಜರುಗಳನ್ನು ಒಪ್ಪಿಕೊಳ್ಳುತ್ತಿದ್ದರು. ನಜರು ಮುಜರೆಯನ್ನು ಮಾಡಿದ ಜನಗಳಿಗೆ ಹೂವಿನಾರ ತಾಂಬೂಲಗಳನ್ನು ನೀಡಿ ಕಳುಹಿಸಿ ಕೊಡುತ್ತಿದ್ದನು. ಕುಲದೇವತೆಯಾದ ಶ್ರೀ ಚಾಮುಂಡೇಶ್ವರಿಗೆ ಕರ್ಪೂರದಾರತಿ ಎತ್ತುವುದರ ಮೂಲಕ ವಿಜಯ ದಶಮಿಯ ಕಾರ್ಯಕ್ರಮಗಳು ಮುಕ್ತಾಯಗೊಳ್ಳುತ್ತಿತ್ತು.[20]

ಹೀಗೆ ನವರಾತ್ರಿ ಉತ್ಸವವನ್ನು ರಾಜ ಒಡೆಯರು ಮತ್ತು ಕಂಠೀರವ ನರಸರಾಜ ಒಡೆಯರು ಶ್ರೀರಂಗಪಟ್ಟಣದಲ್ಲಿ ಬಹಳ ವೈಭವದಿಂದ ನಡೆಸಿಕೊಂಡು ಬಂದರು. ನಂತರ ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿ ನವರಾತ್ರಿ ಉತ್ಸವವು ಮುಂದುವರಿದುಕೊಂಡು ಬಂದಿತು. ಕ್ರಿ.ಶ. 1799ರಲ್ಲಿ ಟಿಪ್ಪುವು ಮರಣ ಹೊಂದಿದ ಮೇಲೆ ಅಧಿಕಾರವು ಮುಮ್ಮಡಿ ಕೃಷ್ಣರಾಜ ಒಡೆಯರ ಕೈಗೆ ಬಂದಾಗ ರಾಜಧಾನಿಯನ್ನು ಶ್ರೀರಂಗಪಟ್ಟಣದಿಂದ ಮೈಸೂರಿಗೆ ವರ್ಗಾಯಿಸಲಾಯಿತು. ನವರಾತ್ರಿ ಉತ್ಸವವು ಮೈಸೂರಿನಲ್ಲಿಯೂ ಬಹಳ ವೈಭವದಿಂದ ನಡೆಯುತ್ತಿತ್ತು ಎಂಬುದಕ್ಕೆ

ದಾಖಲೆಗಳಿವೆ.[21] ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಜಂಬೂ ಸವಾರಿಯ ದೃಶ್ಯವನ್ನು ಇಂದಿಗೂ ಜಗನ್ಮೋಹನ ಅರಮನೆಯ ಗೋಡೆವೊಂದರ ಮೇಲೆ ಕಾಣಬಹುದಾಗಿದೆ.

ಒಟ್ಟಿನಲ್ಲಿ ಶ್ರೀರಂಗಪಟ್ಟಣ ಸಾಂಸ್ಕೃತಿಕ ಸೆಲೆಯಾಗಿ ತನ್ನ ವೈಭವವನ್ನು ಪ್ರಕಟಪಡಿಸಿದ್ದು ನವರಾತ್ರಿಯ ಆಚರಣೆಯ ಸಂದರ್ಭದಲ್ಲಿ ಎಂದು ಹೇಳಬಹುದು. ಮೈಸೂರು ರಾಜ್ಯದ ನಾನ ಕಡೆಗಳಿಂದ ಪ್ರಜೆಗಳು ಇದನ್ನು ವೀಕ್ಷಿಸಲು ರಾಜಧಾನಿಗೆ ಬರುತ್ತಿದ್ದರು. ಲಲಿತಕಲೆಗಳ ಪ್ರದರ್ಶನಕ್ಕೆ ಮತ್ತು ಜಾನಪದ, ನೃತ್ಯ, ಆಟಪಾಠಗಳ ಪ್ರದರ್ಶನಕ್ಕೂ ನವರಾತ್ರಿ ಜನರಿಗೆ ಒಳ್ಳೆಯ ಅವಕಾಶವನ್ನು ನೀಡಿತ್ತು. ಇದಲ್ಲದೆ ಮೈಸೂರಿನ ಒಡೆಯರಿಗೂ ನವರಾತ್ರಿ ಉತ್ಸವ ತಮ್ಮ ವೈಭವ, ದರ್ಪ, ಪ್ರತಿಷ್ಠೆ ಮತ್ತು ಅಧಿಕಾರಗಳನ್ನು ಪ್ರದರ್ಶಿಸುವ ಅವಕಾಶವನ್ನು ನೀಡಿದ್ದಿತು ಎಂದು ಹೇಳಬಹುದು.

**ಸಾಂಸ್ಕೃತಿಕ ಜೀವನದ ಕೇಂದ್ರವಾಗಿ ಶ್ರೀರಂಗಪಟ್ಟಣ ನಿರ್ವಹಿಸಿದ್ದ ಪಾತ್ರವನ್ನು ಈಗ ಇಲ್ಲಿ ಪ್ರಸ್ತಾಪಿಸಬಹುದು.**

### ಸಂಗೀತ

ದಕ್ಷಿಣದ ಸಂಗೀತ ಎಂದೂ ಹೆಸರಿರುವ ಈ ಪದ್ಧತಿ ಭಾರತೀಯ ಸಂಗೀತದ ಎರಡು ಮುಖ್ಯ ಪ್ರಕಾರಗಳಲ್ಲಿ ಒಂದು ಇನ್ನೊಂದು ಉತ್ತರಾಧಿ (ಹಿಂದೂಸ್ಥಾನಿ) ಕರ್ನಾಟಕ ಸಂಗೀತ ಈಗ ದಕ್ಷಿಣ ಕರ್ನಾಟಕ ಮತ್ತು ತಮಿಳುನಾಡು, ಆಂಧ್ರಪ್ರದೇಶ ಮತ್ತು ಕೇರಳಗಳಲ್ಲಿ ವಿಶೇಷವಾಗಿ ಪ್ರಚಾರದಲ್ಲಿದೆ. ಕನ್ನಡ, ಸಂಸ್ಕೃತ, ತೆಲುಗು, ತಮಿಳು ಮುಂತಾದ ಎಲ್ಲಾ ಭಾಷೆಗಳ ಸೇವೆಯನ್ನು ಪಡೆದು ಗಾಯನ, ವಾದನ, ನಾಟ್ಯ, ನರ್ತನ, ರಸಭಾವ, ಅಲಂಕಾರ, ಛಂದಸ್ಸು, ಧ್ರುವಗಾನ ಮೊದಲಾದ ಎಲ್ಲಾ ಅಂಗಗಳೊಡನೆ ಬೆಳೆದಿರುವ ಈ ಸಂಗೀತ ಪದ್ಧತಿಗೆ ಕನ್ನಡಿಗರ ಕೊಡುಗೆ ಪ್ರಮುಖವಾದುದು. ಕರ್ನಾಟಕದ ಸಂಗೀತ ಶಾಸ್ತ್ರಜ್ಞರ ಕಾಣಿಕೆ ಹಾಗೂ ಪ್ರಾಚೀನ ಕಾಲದಿಂದ ಈ ನಾಡಿನಲ್ಲಿ ದೊರೆತ ವಿಶೇಷ ಪ್ರೋತ್ಸಾಹ ಇವು ಕರ್ನಾಟಕ ಸಂಗೀತ ರೂಪುಗೊಳ್ಳಲು ಮುಖ್ಯ ಕಾರಣ. ಇದರಿಂದಲೇ ಈ ಪ್ರಕಾರಕ್ಕೆ ಕರ್ನಾಟಕದ ಹೆಸರು ಜೊತೆಗೂಡಿಕೊಂಡಿದೆ.

ಕರ್ನಾಟಕದಲ್ಲಿ ಬಹು ಹಿಂದಿನಿಂದಲೂ ಸಂಗೀತಕ್ಕೆ ವಿಶೇಷವಾದ ಮನ್ನಣೆ ಇತ್ತೆಂಬುದು ಹಲವು ಶಾಸನ, ಸಾಹಿತ್ಯ, ಉಲ್ಲೇಖಗಳಿಂದ ತಿಳಿಯುತ್ತದೆ. ವಿಜಯನಗರದ ಅರಸರ ಕಾಲದಲ್ಲಿ ಕರ್ನಾಟಕ ಸಂಗೀತ ಸ್ಪಷ್ಟ ರೂಪುರೇಖೆಗಳೊಡನೆ ವಿಶಿಷ್ಟ ಅವಿಷ್ಕಾರಗಳೊಡನೆ ರೂಪು ತಾಳಿತು.

ಕರ್ನಾಟಕ ಸಾಮ್ರಾಜ್ಯದ ಸ್ಥಾಪನೆಗೆ ಕಾರಣರಾದ ವಿದ್ಯಾರಣ್ಯರು ದಕ್ಷಿಣಾದಿ ಸಂಗೀತವನ್ನು ಪುನರುತ್ಥಾನ ಮಾಡಿದ ಮಹಾಮಹಿಮರು. ಅವರು "ಸಂಗೀತಸಾರ" ವೆಂಬ ಗ್ರಂಥವನ್ನು ಬರೆದರು. ಕರ್ನಾಟಕ ಸಂಗೀತ ನೆಲೆಗೊಳ್ಳಲು ಅವರು ಅಂಕುರಾರ್ಪಣ ಮಾಡಿದರು. ಅವರು ಆರಂಭಿಸಿದ ಅಥವಾ ಸ್ಫುಟಪಡಿಸಿದ ಸಂಗೀತ ಪದ್ಧತಿಯೇ ಕರ್ನಾಟಕ ಸಂಗೀತ. ವಿಜಯನಗರದ ಪಥನಾ ನಂತರ ದಕ್ಷಿಣ ಕರ್ನಾಟಕದ ಹಲವು ಸಂಸ್ಥಾನಗಳು ಸಂಗೀತಕ್ಕೆ ಪ್ರೋತ್ಸಾಹವನ್ನು ಮುಂದುವರಿಸಿದವು. ವಿಜಯನಗರದ ಸಂಪ್ರದಾಯಗಳನ್ನು ಮೈಸೂರಿನ ಒಡೆಯರು ಪೋಷಿಸಿ ಮುಂದುವರಿಸಿದರು. ಐದನೆಯ ಚಾಮರಾಜ ಒಡೆಯರು ಚತುಷಷ್ಠೀ ಕಲಾ ಪರಿಣಿತರಾಗಿದ್ದರು. ಕಂಠೀರವನ ನಿತ್ಯೋಲಗ ದಲ್ಲಿ ನಾಟ್ಯ, ತಂಬೂರಿ, ವೀಣಾಧಿ ಸಂಗೀತ ಕಾರ್ಯಕ್ರಮ ನಡೆಯುತ್ತಿದ್ದಿತು. ಅವನ ಆಸ್ಥಾನದಲ್ಲಿ ಸಂಗೀತ ಕೋವಿದೆಯರಿದ್ದರು. ಅವನು ಸ್ವತಃ ಸಂಗೀತ ಸಾಹಿತ್ಯಶಾಸ್ತ್ರ ವಿಶಾರದನಾಗಿದ್ದನು.[22]

## ನೃತ್ಯ

ನೃತ್ಯಕ್ಕೆ ಶ್ರೀರಂಗಪಟ್ಟಣದ ಆಸ್ಥಾನದಲ್ಲಿ ಹೆಚ್ಚಿನ ಮನ್ನಣೆ ದೊರೆತಿತ್ತು. ಅಂತಃಪುರದ ಚೇಟಿಯರು ನೃತ್ಯಕಲೆಯಲ್ಲಿ ಹೆಚ್ಚು ಆಸಕ್ತಿಯನ್ನು ಹೊಂದಿದ್ದರು. ಕಂಠೀರವ ಅರಸರ ಅರಮನೆ ಯಲ್ಲಿ ನೃತ್ಯ ಸಭಾಂಗಣ ಇದ್ದಿತು. ವಿಸ್ತಾರವಾದ ಸಭಾಂಗಣದಲ್ಲಿ ಅವುಗಳ ಕಂಬಗಳ ಹಾಗೂ ಗೋಡೆಗಳ ಮೇಲೆಲ್ಲಾ ವಿವಿಧ ಬಣ್ಣಗಳ ಚಿತ್ರಗಳಿದ್ದವು. ಕೆಲವು ಸ್ತ್ರೀ ಚಿತ್ರಗಳು ನಾಟ್ಯ ಭಂಗಿ ಯಲ್ಲಿರುತ್ತಿದ್ದವು. ದೇವಾಲಯಗಳಲ್ಲಿ ಪೂಜಾ ಸಮಯದಲ್ಲಿ ಅದರಲ್ಲೂ ವಿಶೇಷವಾದ ಉತ್ಸವಗಳು ಜರುಗುವ ಕಾಲದಲ್ಲಿ ನೃತ್ಯಸೇವೆ ಒಂದು ಅಗತ್ಯವಾದ ಅಂಗವಾಗಿ ಈ ಕಾಲದಲ್ಲಿ ಬೆಳೆದು ಬಂದಿತು. ನಾಟ್ಯ ಸೇವೆಗಾಗಿಯೇ ದೇವದಾಸಿಯರು ಶ್ರೀರಂಗಪಟ್ಟಣದಲ್ಲಿ ಇರುತ್ತಿದ್ದರು. ಇವರಲ್ಲದೆ ವೇಶ್ಯೆಯರು ನಾಟಕ ಕಲೆಗಳಲ್ಲಿ ಪರಿಣತಿ ಪಡೆದು ದೇವಾಲಯಗಳಲ್ಲಿ ಉತ್ಸವಾಧಿಗಳಲ್ಲಿ ತಮ್ಮ ನೃತ್ಯ ವೈಖರಿಯನ್ನು ಪ್ರದರ್ಶಿಸುತ್ತಿದ್ದರು. ಇದಲ್ಲದೆ ಸಮಾಜದ ಗಣ್ಯವರ್ಗದ, ಶ್ರೀಮಂತ ವರ್ಗದ ಮನೋರಂಜನೆಗಾಗಿಯೂ ಇವರು ನಾಟ್ಯ ಪ್ರದರ್ಶನ ಮಾಡುತ್ತಿದ್ದರು. ನಾಟ್ಯ ಕಲೆಯಲ್ಲಿ ನಿಷ್ಣಾತೆ ಯರಾಗಿದ್ದ ವೇಶ್ಯೆಯರಿಗೆ ಸಮಾಜದಲ್ಲಿ ಗೌರವ ಸ್ಥಾನವಿತ್ತು. ರಾಜರಂತೆಯೇ ಅವರ ಸಾಮಂತರು, ಅಧಿಕಾರಿಗಳು ಪ್ರೋತ್ಸಾಹ ಕೊಟ್ಟಿದ್ದರಿಂದ ಈ ಕಲೆಗಳು ಅವರಲ್ಲಿ ಮನೆ ಮಾಡಿಕೊಂಡಿದ್ದವು. ಇಂತಹ ವೇಶ್ಯಾವಾಟಿಕೆಗಳ ವರ್ತನೆ "ಕಂಠೀರವ ನರಸರಾಜ ವಿಜಯ"ದಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಆದರೆ ಆ ಕಾಲದ ನಾಟ್ಯದ ಪೂರ್ಣ ಸ್ವರೂಪ, ಅವರು ಪಡೆದಿದ್ದ ಪರಿಣತಿಯ ರೀತಿ ಯನ್ನು ಈಗ ಅರಿಯುವುದು ಅಸಾಧ್ಯವಾದರೂ "ಕಂಠೀರವ ನರಸರಾಜ ವಿಜಯ"ದಲ್ಲಿ ಉಲ್ಲೇಖ

ವಾಗಿರುವ ನೃತ್ಯಗಾರ್ತಿಯರ ವಿಷಯವನ್ನು ನೋಡಿದರೆ ಆ ಕಾಲದ ನಾಟ್ಯ ವಿದ್ಯೆಯ ತಜ್ಞತೆಯನ್ನು ನಾವು ಊಹಿಸಬಹುದು.[23] ಇವುಗಳೊಂದಿಗೆ ಜಾನಪದನೃತ್ಯ ಜಾನಪದ ಮೇಳಗಳ ಅಭಿವೃದ್ಧಿಯೂ ಸಾಕಷ್ಟು ಆಗಿರಬೇಕೆಂದು ನಾವು ತಿಳಿಯಬಹುದು.

ಕರ್ನಾಟಕ ಜಾನಪದ ಕಲಾಭಿವ್ಯಕ್ತಿಯ ಒಂದು ಮುಖ್ಯ ಪ್ರಕಾರವಾಗಿರುವ ರಂಗಭೂಮಿ ಕಲೆ ಬಹು ಪ್ರಾಚೀನ ಕಾಲದಿಂದಲೂ ಪ್ರಚಲಿತದಲ್ಲಿರುವುದಲ್ಲದೆ, ಶಿಷ್ಟ ರಂಗಭೂಮಿಗಿಂತ ಅನೇಕ ರೀತಿಯಲ್ಲಿ ಭಿನ್ನವಾದ ಕೆಲವು ಅಂಶಗಳನ್ನು ಒಳಗೊಂಡಿದ್ದು ತನ್ನ ಸ್ವಂತಿಕೆಯನ್ನು ಉಳಿಸಿ ಬೆಳೆಸಿಕೊಂಡು ಬಂದಿದೆ. ಇಂದು ನಾಡಿನ ವಿವಿಧ ಭಾಗಗಳಲ್ಲಿ ಪ್ರಚಲಿತವಾಗಿರುವ ಅನೇಕ ಬಗೆಯ ರಂಗಭೂಮಿಯ ಅಭಿವ್ಯಕ್ತಿ ರೀತಿಗಳನ್ನು ಗುರುತಿಸಬಹುದಾಗಿದೆ. ಜಾನಪದ ರಂಗಭೂಮಿಗೆ ಸಂಬಂಧಿಸಿದಂತೆ ಯಕ್ಷಗಾನ, ಬಯಲಾಟ, ಮೂಡಲಪಾಯ, ಪಡುವಲಪಾಯ, ತಾಳಮದ್ದಲೆ, ಸಣ್ಣಾಟ, ತೂಗಲು ಗೊಂಬೆ ಆಟ, ಸೂತ್ರದ ಗೊಂಬೆಯಾಟ, ಶ್ರೀ ಕೃಷ್ಣ ಪಾರಿಜಾತ, ಕರಿಬಂಟ, ಕೋಡಂಗಿ ಇವು ಬಹುಮುಖ್ಯವಾಗಿವೆ.

ಕನ್ನಡ ನಾಟಕ ಸಾಹಿತ್ಯದ ಪ್ರಾಚೀನತೆಯನ್ನು ಗಮನಿಸಿದರೆ ನಾಟಕ, ನಾಟಕಾಭೀನಯ, ನಾಟಕ ಶಾಲೆ, ನಟ, ಪಗರಣ ಮುಂತಾದ ಶಬ್ಧಗಳು ತಮ್ಮ ಗಮನವನ್ನು ಸೆಳೆಯುತ್ತವೆ. ಕನ್ನಡದಲ್ಲಿ ಶಿಷ್ಟ ನಾಟಕ ಸಾಹಿತ್ಯದ ಚರಿತ್ರೆ ಖಚಿತವಾಗಿ ಆರಂಭವಾಗುವುದು 17ನೇಯ ಶತಮಾನದಿಂದ. ಕಂಠೀರವ ನರಸರಾಜ ವಿಜಯದಲ್ಲಿ ದಶಾವತಾರ ನಾಟಕದ ವರ್ಣನೆ ಬರುತ್ತದೆ. "ಹರಿಯ ದಶಾವತಾರದ ನಾಟಕವ ತೋರಿ ಭಾಗವರ ಚಂದ ನರಸರಾಜೇಂದ್ರ ಚಂದ್ರ ಮನೋಲಗದಲಿ ಪರಿಶೋಭಿಸುದುದೇ ಪೇಳೆವ[24] ಎಂದು ತಿಳಿಸುತ್ತದೆ.

ಒಟ್ಟನಲ್ಲಿ ಸಾಂಸ್ಕೃತಿಕ ದೃಷ್ಟಿಯಿಂದ ಶ್ರೀರಂಗಪಟ್ಟಣದ ಚರಿತ್ರೆಯನ್ನು ಅವಲೋಕಿಸಿದರೆ ಕೆಲವು ಪ್ರಮುಖ ಅಂಶಗಳು ತಿಳಿದು ಬರುತ್ತವೆ. ಒಂದನೆಯದಾಗಿ, ಶ್ರೀರಂಗಪಟ್ಟಣವು ಸಾಂಸ್ಕೃತಿಕವಾಗಿ ವಿಜಯನಗರದ ಸಂಸ್ಕೃತಿಯ ನಾನಾ ಪ್ರಕಾರಗಳನ್ನು ಭಾರತೀಯ ಸಂಸ್ಕೃತಿಯ ಚೌಕಟ್ಟಿನೊಳಗೆ ಮುಂದುವರಿಸಿಕೊಂಡು ಬಂದಿತು. ಎರಡನೆಯದಾಗಿ, ಸಾಂಸ್ಕೃತಿಕ ಏಕತೆಗಿಂತ ಸಾಂಸ್ಕೃತಿಕ ವೈವಿಧ್ಯತೆಯನ್ನು ಎತ್ತಿ ಹಿಡಿಯಿತು. ಮೂರನೆಯದಾಗಿ, ಶ್ರೀರಂಗಪಟ್ಟಣದಲ್ಲಿ ಆಳ್ವಿಕೆ ಮಾಡಿದ ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಸಹ ಶ್ರೀರಂಗಪಟ್ಟಣದ ಸಾಂಪ್ರದಾಯಿಕ ಸಾಂಸ್ಕೃತಿಕ ಆಚರಣೆಗಳಿಗೆ

ಭಂಗ ತರಲಿಲ್ಲ ಮತ್ತು ಅವುಗಳನ್ನು ಮುಂದುವರಿಸಿಕೊಂಡು ಹೋಗಲು ಪ್ರಯತ್ನಿಸಿದರು. ಕೊನೆಯದಾಗಿ, ಶ್ರೀರಂಗಪಟ್ಟಣವು ಸಾಂಸ್ಕೃತಿಕವಾಗಿ ಹಿಂದೂ ಮುಸ್ಲಿಂ ಮತ್ತು ಪಾಶ್ಚಿಮಾತ್ಯ ಸಾಂಸ್ಕೃತಿಕ ಸಂಮಿಶ್ರಣವನ್ನು ಪಡೆದುಕೊಂಡಿತು. ಹೀಗೆ ಹಿಂದಿನ ಪರಂಪರೆ ಮತ್ತು ಕಾಲದಿಂದ ಕಾಲಕ್ಕೆ ಅನಿವಾರ್ಯವಾಗಿ ಅಳವಡಿಸಿಕೊಳ್ಳಬೇಕಾದ ಬದಲಾವಣೆಯ ಅಂಶವನ್ನು ಸೇರಿಸಿಕೊಳ್ಳುತ್ತಾ ಶ್ರೀರಂಗಪಟ್ಟಣವು ತನ್ನ ನೆಲದಲ್ಲಿ ಮೇಲೆ ವಿವರಿಸಿದ ಅಮೂರ್ತ ರಊಪದ ಸಂಸ್ಕೃತಿಯನ್ನು ಎತ್ತಿ ಹಿಡಿಯುತ್ತಾ ಸಹನೆ ಸಹಬಾಳ್ವೆ ಮತ್ತು ಪರಮತ ಸಹಿಷ್ಣುತಾ ಗುಣಗಳನ್ನು ಪ್ರತಿಪಾದಿಸಿತು. ಈಗ ನಾವು ಶ್ರೀರಂಗಪಟ್ಟಣ ಅರಳಿಸಿದ ಮೂರ್ತ ಸ್ವರೂಪದ ಸಂಸ್ಕೃತಿಯ ಪ್ರಕಾರವನ್ನು ಅಲ್ಲಿಯ ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಪರಿಶೀಲಿಸೋಣ.

## ಕಲೆ ಮತ್ತು ವಾಸ್ತುಶಿಲ್ಪ

ಶ್ರೀರಂಗಪಟ್ಟಣವು ದೇವಾಲಯಗಳ ನಗರವೆಂದೇ ಪ್ರಸಿದ್ಧಿಯನ್ನು ಪಡೆದಿದೆ. ಕೋಟೆಯ ಒಳಗಡೆ ಸುಮಾರು 30ಕ್ಕೂ ಹೆಚ್ಚು ಗುಡಿಗಳಿವೆ. ಅವುಗಳ ಪೈಕಿ ರಂಗನಾಥಸ್ವಾಮಿ, ಲಕ್ಷ್ಮೀ ನರಸಿಂಹಸ್ವಾಮಿ, ಗಂಗಾಧರೇಶ್ವರ, ಜ್ಯೋತಿರ್ಮಹೇಶ್ವರ ಈ ನಾಲ್ಕು ದೇವಾಲಯಗಳು ದೊಡ್ಡದಾಗಿವೆ. ಇಷ್ಟೊಂದು ದೊಡ್ಡ ದೊಡ್ಡ ದೇವಾಲಯಗಳು ಒಂದೇ ಕಡೆಯಲ್ಲಿರುವುದು ಸೂಜಿಗ ಎನಿಸುತ್ತದೆ. ಅವುಗಳಲ್ಲದೆ ಕೋಟೆಯ ಆವರಣದಲ್ಲೇ ರಾಮ, ಲಕ್ಷ್ಮೀನಾರಾಯಣ, ಸಂತಾನ ಗೋಪಾಲಕೃಷ್ಣ, ನಗರೇಶ್ವರ, ಜನಾರ್ಧನ, ಕಾಳಮ್ಮ, ಅಂಕಾಳಮ್ಮ, ಮಾರಮ್ಮ ಮುಂತಾದ ದೇವಾಲಯಗಳು ಇವೆ. ಅಲ್ಲದೆ ಹೊಸದಾಗಿ ನಿರ್ಮಾಣವಾಗುತ್ತಿರುವ ಅಯ್ಯಪ್ಪಸ್ವಾಮಿ ಗುಡಿ, ಸುಬ್ರಹ್ಮಣ್ಯನ ಗುಡಿ, ಶತಕೋಟಿ ರಾಮಮಂದಿರ ಇವು ಗಮನಾರ್ಹವಾದವುಗಳಾಗಿವೆ. ಅಲ್ಲದೆ 1787ರಲ್ಲಿ ನಿರ್ಮಾಣಗೊಂಡ ಮಸ್ಜಿದ್-ಎ-ಅಲ್ ಅಥವಾ ಜುಮ್ಮಮಸ್ಜಿದ್ ಮಸೀದಿಯು ಇದೆ. ಇವುಗಳು ಕೋಟೆಯಷ್ಟಕ್ಕೆ ಸೀಮಿತವಾಗಿವೆ. ಇಡೀ ದ್ವೀಪವನ್ನು ಪರಿಗಣನೆಗೆ ತೆಗೆದುಕೊಂಡರೆ ಸುಮಾರು ನೂರು ದೇವಾಲಯಗಳಾಗಬಹುದು. ಇವಲ್ಲದೆ ಅಲ್ಲಿ ಉತ್ತರ ಮಠವಿದೆ; ರಾಮೇಶ್ವರ ಸನ್ನಿಧಿಯಿದೆ; ರಾಘವೇಂದ್ರ ಮಠವಿದೆ; ಯತಿರಾಜ ಮಠವಿದೆ; ಆಳ್ವರ ಸನ್ನಿಧಿಯಿದೆ; ಜ್ಞಾನನಿಧಿ ಗಳೆಂಬ ಮಾಧ್ವ ಸ್ವಾಮಿಗಳ ಸನ್ನಿಧಿಯಿದೆ; ಆಂಜನೇಯ ಗುಡಿಯಿದೆ. ಇದನ್ನೆಲ್ಲಾ ನೋಡಿದರೆ ಶ್ರೀರಂಗಪಟ್ಟಣ ದೇವಾಲಯಗಳ ನಗರವೆಂದರೆ ಸೋಜಿಗವಾಗಬಹುದು.

ಶ್ರೀರಂಗಪಟ್ಟಣದ ಇತಿಹಾಸದಲ್ಲಿ ಮೈಸೂರು ಒಡೆಯರು, ಹೈದರ್ ಆಲಿ ಮತ್ತು ಟಿಪ್ಪು ಸುಲ್ತಾನರು ದಕ್ಷ ಆಡಳಿತಗಾರರೂ, ಕಲಾಪ್ರೇಮಿಗಳು ಹಾಗೂ ಕಲಾ ಪೋಷಕರು ಆಗಿದ್ದರು. ಇವರುಗಳ ಆಡಳಿತದಲ್ಲಿ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆಯಿತು. ಶ್ರೀರಂಗ ಪಟ್ಟಣದಲ್ಲಿ ನಾವು ಎರಡು ರೀತಿಯ ವಾಸ್ತು ಕೃತಿಯನ್ನು ನೋಡುತ್ತೇವೆ. 1) ರಕ್ಷಣಾ ದೃಷ್ಟಿ ಯಿಂದ ಶ್ರೀರಂಗಪಟ್ಟಣದಲ್ಲಿ ಕಟ್ಟಿಸಿರುವ ಕೋಟೆ ಕೊತ್ತಲಗಳು, ಮದ್ದಿನ ಮನೆಗಳು, ಭದ್ರವಾದ ನೆಲಮಾಳಿಗೆಗಳು, ಕಾರಾಗೃಹಗಳು (ಇದರ ಬಗ್ಗೆ ಈಗಾಗಲೇ 3ನೇಯ ಅಧ್ಯಾಯದಲ್ಲಿ ಪ್ರಸ್ತಾಪಿಸ ಲಾಗಿದೆ) 2) ದೇವಾಲಯಗಳು, ಅರಮನೆಗಳು, ಮಸೀದಿಗಳು, ಸಮಾಧಿಗಳಾಗಿವೆ.

ಶ್ರೀರಂಗಪಟ್ಟಣದ ದೇವಾಲಯಗಳಲೆಲ್ಲಾ ಶ್ರೀರಂಗನಾಥ ದೇವಾಲಯವು ಬಹು ದೊಡ್ಡದು. ರಂಗನಾಥನು ಈ ಕ್ಷೇತ್ರದ ಆದಿದ್ವವ. ಅವನ ನಾಮ ಬಲದ ಮೇಲೆಯೆ ಊರಿಗೆ ಶ್ರೀರಂಗಪಟ್ಟಣ ಎಂದು ಹೆಸರಾಗಿರುವುದು. ಈ ದೇವಾಲಯ ದ್ರಾವಿಡ ಶೈಲಿಯಲ್ಲಿದ್ದು ಹಂತಹಂತವಾಗಿ ಬೆಳವಣಿಗೆ ಗೊಂಡಿದ್ದನ್ನು ಕಾಣಬಹುದು. ಕ್ರಿ.ಶ. 817ರಲ್ಲಿ ನಿರ್ಮಾಣಗೊಂಡ ಈ ದೇವಾಲಯ ಕ್ರಿ.ಶ. 1200ರ ವೇಳೆಗೆ ಇದರ ಬೃಹತ್ ನಿರ್ಮಾಣ ಕಾರ್ಯ ಹೊಯ್ಸಳ ದೊರೆ ಉದಯಾದಿತ್ಯನಿಂದ ಆಯಿತು ಎನ್ನಬಹುದು.[25] ದೇವಾಲಯದ ಹೆಚ್ಚು ಒಳಭಾಗ ಹೊಯ್ಸಳರ ಕಾಲದ್ದಾಗಿದ್ದು, ಗರ್ಭಗೃಹ ಮತ್ತು ಸುಕನಾಸಿಗಳ ಮಧ್ಯದಲ್ಲಿ ಪದ್ಯಗಳನ್ನು ಬಿಡಿಸಿದೆ. ವಿಜಯನಗರ ಕಾಲದ ಗಂಟೆ ಮಾದರಿಯ ಕಂಬಗಳು ನವರಂಗದಲ್ಲಿವೆ. ನವರಂಗ ದ್ವಾರದ ಬಳಿ ಎರಡು ದೊಡ್ಡ ದ್ವಾರಪಾಲಕ ವಿಗ್ರಹಗಳಿವೆ. ಮಹಾದ್ವಾರದ ಗೋಪುರ, ಮುಖಮಂಟಪ ಮತ್ತು ಗರ್ಭಗೃಹದ ಗೋಪುರ ವಿಜಯನಗರ ಶಿಲ್ಪ ಲಕ್ಷಣವುಳ್ಳವುಗಳಾಗಿವೆ.[26] ದೇವಾಲಯದ ಒಳಗೆ ಗರ್ಭಗುಡಿಯಲ್ಲಿ ಶ್ರೀರಂಗನಾಥನ ಬೃಹತ್ ಪ್ರಮಾಣದ ಭವ್ಯ ಶಿಲಾ ವಿಗ್ರಹವಿದೆ. ಸ್ವಾಮಿಯು ಸಪ್ತ ಹೆಡೆಗಳುಳ್ಳ ಆದಿಶೇಷನ ಮೇಲೆ ಅನಂತಶಯನ ಭಂಗಿಯಲ್ಲಿ ಪವಡಿಸಿದ್ದಾನೆ. ಶ್ರೀರಂಗನಾಥನ ಬಳಿ ಕಾವೇರಿಯು ಕೈಯಲ್ಲಿ ಕಮಲ ವನ್ನು ಹಿಡಿದು ಕುಳಿತಿದ್ದಾಳೆ. ಅಲ್ಲೇ ಗೌತಮ ಋಷಿಯ ರಂಗನಾಥನನ್ನು ಸುತ್ತಿಸುತ್ತಾ ನಿಂತಿದ್ದಾನೆ. ದೇವಾಲಯದ ಒಳಗಡೆಯೇ ರಂಗನಾಯಕಮ್ಮನವರ ಪ್ರತ್ಯೇಕ ಸನ್ನಿಧಿಯಿದೆ. ಹಜರ ಪ್ರಾಕಾರದಲ್ಲಿ ಗರುಡ, ವಿಶ್ವಕ್ಸೇನ, ಸೂರ್ಯನಾರಾಯಣ, ಲಕ್ಷ್ಮೀ ನರಸಿಂಹಸ್ವಾಮಿ, ಗಜೇಂದ್ರ ವರದಸ್ವಾಮಿ, ವೆಂಕಟರಮಣಸ್ವಾಮಿ, ಹನುಂತಾದಿ ದೇವರ ಪ್ರತ್ಯೇಕ ಗುಡಿಗಳಿವೆ. ಅವುಗಳ ಜೊತೆಗೆ ಶ್ರೀ ವೈಷ್ಣವ ಆಚಾರ್ಯರ ಮತ್ತು ಆಳ್ವಾರರ ಸನ್ನಿಧಿಗಳಿವೆ. ಶ್ರೀರಂಗಪಟ್ಟಣವನ್ನು ಆಳಿದ ಹೈದರಾಲಿ ಮತ್ತು ಟಿಪ್ಪುಸುಲ್ತನರು ಅನ್ಯ ಮತೀಯರಾಗಿದ್ದರೂ ಕೂಡ ಶ್ರೀರಂಗನಾಥನ ಬಗೆಗೆ ವಿಶೇಷ ಭಕ್ತಿ ಗೌರವ

ತಳೆದವರಾಗಿದ್ದು, ರಂಗನಾಥನ ದೇವಾಲಯದಕ್ಕೆ ಕೆಲವು ಚಿನ್ನ-ರನ್ನದ ಆಭರಣಗಳು, ಬೆಳ್ಳಿಯ ಪೂಜಾ ಪಾತ್ರೆಗಳನ್ನು ದಾನ ಕೊಟ್ಟಿದ್ದನೆಂದು ತಿಳಿದುಬರುತ್ತದೆ.[27]

ಶ್ರೀರಂಗಪಟ್ಟಣದಲ್ಲಿರುವ ಇನ್ನೊಂದು ಮುಖ್ಯ ದೇವಾಲಯವೆಂದರೆ, ಶ್ರೀ ಲಕ್ಷ್ಮೀ ನರಸಿಂಹಸ್ವಾಮಿ ದೇವಾಲಯ. ಈ ದೇವಾಲಯವನ್ನು ಕಂಠೀರವ ನರಸರಾಜ ಒಡೆಯರ್ (1638-1659) ಕಟ್ಟಿಸಿದನರೆಂದು ತಿಳಿದು ಬರುತ್ತದೆ. ಈ ದೇವಾಲಯವು ದ್ರಾವಿಡ ಶೈಲಿಯ ಸಾಮಾನ್ಯ ಕಟ್ಟಡವಾಗಿದೆ. ಈ ದೇವಾಲಯದಕ್ಕೆ ಸುತ್ತಲೂ ಕಲ್ಲಿನ ಗೋಡೆ, ವಿಶಾಲವಾದ ಕೈಸಾಲೆ, ಏಳು ಮಹಡಿಯ ಗೋಪುರ, ಮಂಟಪಗಳು, ನವರಂಗ, ಪರಿವಾರ ದೇವತೆಗಳಿಗೆ ಆಲಯ ಮತ್ತು ಅಂಗಳ, ಗರ್ಭಗೃಹ ಇವೆ. ಇವುಗಳ ಜೊತೆಗೆ ಯಾಗ ಶಾಲೆ, ವಸಂತೋತ್ಸವದ ಕೊಳಗಳು ಇವೆ. ಪಂಚರಾತ್ರ ಮತ್ತು ವೈಖಾನನ ಆಗಮಶಾಸ್ತ್ರಗಳ ಪ್ರಕಾರವಾಗಿ ನರಸಿಂಹ ವಿಗ್ರಹವನ್ನು ಕಂಠೀರವನು ಪ್ರತಿಷ್ಠಾಪಿಸಿದ್ದಾನೆ. ಗರ್ಭಗೃಹದ ಎತ್ತರವಾದ ವೇದಿಕೆಯ ಮೇಲೆ ಲಕ್ಷ್ಮೀಯನ್ನು ತೊಡೆಯ ಮೇಲೆ ಕೂರಿಸಿಕೊಂಡ ಸ್ವಾಮಿಯ ದಿವ್ಯವಾದ ವಿಗ್ರಹವಿದೆ. ಶಿಲ್ಪಕಲೆಯ ದೃಷ್ಟಿಯಿಂದ ಮನಮೋಹಕ ವಾದುದು. ನಾಚ್ಚಿಯರ್ ಉತ್ಸವ ಮೂರ್ತಿಗಳು, ಸಣ್ಣ ಪ್ರಮಾಣದ ದೇವರುಗಳನ್ನು ಮತ್ತು ಆಳ್ವಾರ ವಿಗ್ರಹಗಳನ್ನು ಅದೇ ಕಾಲದಲ್ಲಿ ಪ್ರತಿಷ್ಠಾಪಿಸಲಾಗಿದೆ. ಅನೇಕ ಬೆಲೆಬಾಳುವ ವಸ್ತುಗಳನ್ನೂ, ಆಭರಣಗಳನ್ನೂ ಈ ದೇವಾಲಯಕ್ಕೆ ಅವನು ದಾನವಾಗಿ ನೀಡಿದ್ದಾನೆ. "ಕಂಠೀರವ ಮುಡಿ" ಎಂಬ ಕಿರೀಟ, ರೇಷ್ಮೆವಸ್ತುಗಳು, ತಟ್ಟೆಗಳು, ಬಟ್ಟಲುಗಳೂ, ಅಡುಗೆ ಮಾಡುವ ಪಾತ್ರೆಗಳು ಹಾಗೂ ಅನೇಕ ವಾಹನಗಳನ್ನು ಅವನು ಅಲ್ಲಿಗೆ ನೀಡಿದನು. ನಿತ್ಯೋತ್ಸವ, ಮಾಸೋತ್ಸವ, ವಾರ್ಷಿಕೋತ್ಸವ ಗಳು ಮತ್ತಿತರ ಉತ್ಸವಗಳು, ವ್ರತಗಳು, ಪೂಜಾವಿಧಿಗಳು ಕ್ರಮಬದ್ಧವಾಗಿ ನಡೆಯುವಂತೆ ಏರ್ಪಾಡುಗಳನ್ನು ಮಾಡಿದನು. ಉತ್ಸವಗಳ ಪೂಜಾವಿಧಿಗಳ ಖರ್ಚುಗಳನ್ನು ಭರಿಸುವುದಕ್ಕಾಗಿ ಅನೇಕ ಅನೇಕ ಹಳ್ಳಿಗಳನ್ನು ಭೂಮಿಯನ್ನು ದಾನವಾಗಿ ನೀಡಿದನು.[28] ಅಲ್ಲದೆ ನರಸಿಂಹಸ್ವಾಮಿ ದೇವಾಲಯದ ವಿವರಣೆಯನ್ನು "ಶ್ರೀ ಮನ್ಮಹಾರಾಜರ ವಂಶಾವಳಿ ಬಹು ಚೆನ್ನಾಗಿ ವರ್ಣಿಸುತ್ತದೆ" ಶ್ರೀರಂಗಪಟ್ಟಣದ ಅರಮನೆಯ ಬಲಭಾಗದಲ್ಲಿ ರಂಗಸ್ವಾಮಿಯ ಗುಡಿಯಂತೆ ನೂತನವಾಗಿ ಗುಡಿ ಗೋಪುರ, ಕೈಸಾಲೆ, ಕಲ್ಯಾಣ ಮಂಟಪ, ಯಾಗಶಾಲೆ, ವಸಂತದ ಕೊಳ ಮುಂತಾದವುಗಳು ಕಟ್ಟಿಸಿ, ತಾವು ನರಸಿಂಹ ಜಯಂತಿ ದಿವಸ ಜನಿಸಿದವರಾದ ಕಾರಣ, ಅಮ್ಮನವರು ಸಹಿತವಾಗಿ ನೃಸಿಂಹ ಸ್ವಾಮಿಯವರನ್ನು, ಉಭಯ ನಾಚ್ಚಿಯಾರು ಸಹಿತವಾಗಿ ಉತ್ಸವ ವಿಗ್ರಹ ಮುಂತಾದ ಪಂಚಬೇರಗಳನ್ನೂ, ಅನಂತ, ಗರುಡ, ಉಷ್ಟಕ್ಸೇನ, ಆಳ್ವಾರು ಮೊದಲಾದ ಪರಿವಾರ ದೇವರು

ಗಳನ್ನೂ, ನೂತನವಾಗಿ ಪಾಂಚರಾತ್ರಾಧ್ಯಾಗಮೋಕ್ತ ಪ್ರಕಾರವಾಗಿ ಅಲ್ಲಿ ಪ್ರತಿಷ್ಠಾಪನೆಯನ್ನು ಮಾಡಿಸಿ, ದೇವರುಗಳೀಗೆ ನಿತ್ಯೋತ್ಸವ, ರಥೋತ್ಸವಾದಿ ಉತ್ಸವಗಳಿಗೂ, ಈ ದೇವರ ಸೇವೆಯನ್ನು ಮಾಡುವ ಉಪಾಧಿ ಬ್ರಾಹ್ಮಣರು ಮುಂತಾದ ಜನಗಳ ಜೀವನಕ್ಕೂ, ರಾಮಾನುಜ ಕೂಟ ನಡೆಯುವುದಕ್ಕೂ, ಬಹಳ ತಸದೀಕುಗನ್ನುಂಟು ಮಾಡಿದರು ಮತ್ತು ಗ್ರಾಮ ಭೂಮಿಗಳನ್ನು ಅನೇಕ ಪೂಜೋಪಕರಣ, ಸೇವೋಪಕರಣ ವಸ್ತ್ರಾಭರಣ ಪಾತ್ರೆಗಳನ್ನು, ನವರತ್ನ ಖಚಿತವಾದ ಕಂಠೀರವ ಮುಡಿಯನ್ನು ಸಮರ್ಪಿಸಿ, ಪ್ರತಿದಿನದಲ್ಲಿಯೂ ದೇವರ ದರ್ಶನ ಮಾಡಿ, ತೀರ್ಥ ಪ್ರಸಾದವನ್ನು ಒಪ್ಪಿಸಿ ಕೊಳ್ಳುತ್ತಿದ್ದರಲ್ಲದೆ, ಈ ದೇವಾಲಯದಲ್ಲಿ ತಮ್ಮ ಭಕ್ತ ವಿಗ್ರಹವನ್ನು ನಿರ್ಮಿಸಿ, ಈ ದೇವಸ್ಥಾನದ ವರದಿಯನ್ನು ನಿತ್ಯದಲ್ಲಿಯೂ ಆ ವಿಗ್ರಹದ ಎದುರಿಗೆ ಹೇಳುವಂತೆ ನಿಬಂಧನೆ ಮಾಡಿದರು" ಎಂದು ತಿಳಿಸುತ್ತದೆ.[29]

ಶ್ರೀರಂಗಪಟ್ಟಣದ ಮತ್ತೊಂದು ಪ್ರಾಚೀನ ದೇವಾಲಯವೆಂದರೆ, ಗಂಗಾಧರೇಶ್ವರ ದೇವಾಲಯ. ಈ ದೇವಾಲಯವು ಕ್ರಿ.ಶ. 16ನೇ ಶತಮಾನದಲ್ಲಿ ವಿಜಯನಗರ ಕಾಲದಲ್ಲಿ ನಿರ್ಮಾಣ ಗೊಂಡದ್ದಾಗಿದೆ. ಇಲ್ಲಿರುವ ಮುಖ್ಯವಾದ ಗಂಗಾಧರೇಶ್ವರ ಲಿಂಗವು ಕಾವೇರಿ ನದಿಯಲ್ಲಿ ಸಿಕ್ಕಿದ ಪವಿತ್ರ ಲಿಂಗವಾಗಿದ್ದು, ದಕ್ಷಿಣ ಗಂಗೆ ಕಾವೇರಿಯನ್ನು ಶಿರದಲ್ಲಿ ಧರಿಸಿದ್ದರಿಂದ ಈ ಲಿಂಗಕ್ಕೆ ಗಂಗಾಧರೇಶ್ವರ ಎಂದು ಹೆಸರು ಬಂದಿದೆ.[30] ಅಲ್ಲದೆ ಈ ದೇವಾಲಯದ ಒಳಗೆ ಓಂಕಾರೇಶ್ವರ ಮೊದಲಾದ 15 ಶಿವಲಿಂಗಗಳಿವೆ. ಗಣೇಶ, ಇಂದ್ರಾಣಿ, ಮಹೇಶ್ವರ ಮೊದಲಾದ ದೇವತಾ ವಿಗ್ರಹ ಗಳಿವೆ. ಈ ದೇವಾಲಯದ ನವರಂಗದಲ್ಲಿ 6 ಮುಖಗಳು 12 ಕೈಗಳೂ ಇರುವ ಸುಬ್ರಹ್ಮಣ್ಯ ವಿಗ್ರಹವಿದೆ. ಅಲ್ಲದೆ ದಳವಾಯಿ ನಂಜರಾಜ ಕೊಟ್ಟಿದ್ದೆನ್ನುವ ಒಂದು ತಾಮ್ರದ ಸುಂದರ ದಕ್ಷಿಣ ಮೂರ್ತಿ ಚಿತ್ರವಿರುವ ಶಾಸನವಿದೆ. ಒಟ್ಟಾರೆ ಈ ದೇವಾಲಯವು ಶಿಲ್ಪ ಸೌಂದರ್ಯಕ್ಕೆ ಹೆಸರುವಾಸಿ ಯಾಗಿದೆ.

ಮೈಸೂರಿನ ಇತಿಹಾಸದಲ್ಲಿ ಬಾಳಿ ಬೆಳಗಿದ ವೀರಯೋಧರ ಸಾಲಿನಲ್ಲಿ ಹೈದರ್ ಆಲಿ ಮತ್ತು ಟಿಪ್ಪುಸುಲ್ತಾನರು ಪ್ರಮುಖರಾಗಿದ್ದಾರೆ. ಇವರು ಕೇವಲ ಪ್ರಸಿದ್ಧಿ ಯೋಧರೂ, ದಕ್ಷ ಆಡಳಿತಗಾರರೂ ಅಲ್ಲದೆ ಕಲಾಪ್ರೇಮಿಗಳು ಆಗಿದ್ದರು. ಇವರು ಆಳಿದ 39 ವರ್ಷಗಳ ಅವಧಿಯಲ್ಲಿ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ಕೊಟ್ಟಿದ್ದರೆಂಬುದಕ್ಕೆ ಶ್ರೀರಂಗಪಟ್ಟಣದ ದರಿಯಾ ದೌಲತ್‌ಬಾಗ್, ಮಸ್ಜಿದ್-ಎ-ಆಲಗುಂಬಜ್, ಮಸ್ಮಿದ್-ಎ-ಅಕ್ಸ್ ಹಾಗೂ ಇನ್ನಿತರ

ಕಟ್ಟಡಗಳು ಸಾಕ್ಷಿಯಾಗಿ ನಿಂತಿವೆ. ಈ ಕಟ್ಟಡಗಳು ಮೊಗಲ್ ಮತ್ತು ಬಿಜಾಪುರ ಸುಲ್ತಾನರ ಕಾಲದ ಮಿಶ್ರ ಕಲಾಶೈಲಿಗಳಿಂದ ಕೂಡಿದ್ದು, ಹಿಂದೂ ಕಲಾ ಶೈಲಿಯ ಪ್ರಭಾವಕ್ಕೂ ಒಳಗಾಗಿವೆ. ಕಂಬಗಳಿಂದ ಕೂಡಿದ ಹಜಾರಗಳು, ರೂಮುಗಳು, ಮಿನಾರುಗಳು ಹಾಗೂ ಕಳಸಗಳು ಮೈಸೂರಿನ ಸುಲ್ತಾನರ ಕಾಲದ ಕಟ್ಟಡಗಳ ಮುಖ್ಯ ಲಕ್ಷಣಗಳಾಗಿವೆ.

## ಧರಿಯಾ ದೌಲತ್

ಶ್ರೀರಂಗಪಟ್ಟಣದ ಕೋಟೆಯ ಹೊರಗಡೆ ಕಾವೇರಿಯ ಉತ್ತರ ದಿಕ್ಕಿಗೆ ಇರುವ ಕಂಬ, ಕಮಾನು, ಪೋಷಾಕು ಮತ್ತು ಮೊಗಶಾಲೆಗಳಿಂದ ಕೂಡಿದ ಈ ಅರಮನೆಯನ್ನು ಟಿಪ್ಪು ಸುಲ್ತಾನನು ಬ್ರಿಟಿಷರೊಡನೆ ಎರಡನೆಯ ಮೈಸೂರು ಯುದ್ಧದಲ್ಲಿ ವಿಜಯಿಯಾದ ಸಂತೋಷದ ಸಂದರ್ಭದ ಸ್ಮಾರಕವಾಗಿ 1784ರಲ್ಲಿ ಕಟ್ಟಿಸಿದ್ದಾನೆ. ಮೊಗಲ್ ಸಾಮ್ರಾಟ ಅಕ್ಬರನು ಅಹಮದಾ ಬಾದಿನಲ್ಲಿ ಕಟ್ಟಿಸಿರುವ ದರ್‌ಬಾರ್ ಹಾಲನ್ನು ಹೋಲುವ ಈ ಅರಮನೆಯು ಮೊಗಲ್ ಬಾದ್ ಷಹರ ಕಾಲದ ಕಲೆಯ ಪ್ರಭಾವಕ್ಕೆ ಹೊರತಾಗಿಲ್ಲವೆಂದೇ ಹೇಳಬಹುದು. ಈ ಅರಮನೆಯನ್ನು ಶೇ.40 ರಷ್ಟು ಇಟ್ಟಿಗೆ ಮತ್ತು ಗಾರೆಯಿಂದಲೂ, ಶೇ.60 ರಷ್ಟು ಸಾಗುವಾನಿ ಮರದಿಂದಲೂ ಕಟ್ಟ ಲಾಗಿದೆ. ಪ್ರತಿಯೊಂದು ಅಂಗುಲವನ್ನು ಅದ್ದೂರಿಯಾಗಿ ವರ್ಣರಂಜಿತವಾಗಿರುವಂತೆ ಮಾಡಲು ಪ್ರಯತ್ನಿಸಲಾಗಿದೆ. ಪ್ರೊಜೆಕ್ಟಿಂಗ್ ಬಾಲ್ಕನೀಸ್‌ಗಳು, ಮೊಗಶಾಲೆಗಳನ್ನು ಹೊಂದಿದ್ದು, 12 ಸಾಗುವನಿ ಕಂಬಗಳ ಆಧಾರದ ಮೇಲೆ ನಿಂತಿದೆ. ಇದರ ಗೋಡೆಗಳ ಮೇಲೆ ಒಂದನೆಯ ಮತ್ತು ಎರಡನೆಯ ಮೈಸೂರು ಯುದ್ಧಗಳ ದೃಶ್ಯಗಳು, ಟಿಪ್ಪು ತನ್ನ ತಂದೆ ಹೈದರ್ ಜೊತೆಗೆ ಯುದ್ಧಕ್ಕೆ ಹೋಗುವ ದೃಶ್ಯಗಳು, ಫ್ರೆಂಚರು ಟಿಪ್ಪುವಿಗೆ ಸಹಾಯ ಮಾಡುತ್ತಿರುವ ದೃಶ್ಯ ಹಾಗೂ ಹೈದರಾಬಾದಿನ ನಿಜಾಮನು ಟಿಪ್ಪುವಿನ ಸಹಾಯಕ್ಕೆ ಬಂದು ಹಿಂತಿರುಗುತ್ತಿರುವ ದೃಶ್ಯಗಳನ್ನು ಚಿತ್ರಿಸಲಾಗಿದೆ. ಹೈದರಬಾದಿನ ನಿಜಾಮನ ಚಿತ್ರದ ಹತ್ತಿರ ಒಂದು ಹಂದಿ ಮತ್ತು ಹಸುವಿನ ಚಿತ್ರಗಳಿವೆ. ಇವು ಟಿಪ್ಪುವು ನಿಜಾಮನನ್ನು ಹಸುವಿನಂತೆ ನಂಬಿದ್ದನೆಂತಲೂ, ಆತನು ಮಾಡಿದ ಮೋಸಕ್ಕೆ ಆತನನ್ನು ಹಂದಿಯಂತೆ (ಹಂದಿಯು ಮುಸ್ಲಿಂರ ದೃಷ್ಟಿಯಲ್ಲಿ ಹೀನ ಪ್ರಾಣಿ) ನೋಡಲಾರಂಭಿಸಿದನೆಂತಲೂ ವ್ಯಕ್ತ ಪಡಿಸುತ್ತದೆ. ಇಲ್ಲಿಯ ಮತ್ತೊಂದು ಅಪೂರ್ವ ಚಿತ್ರ ಕಾಂಜೀವರಂ ಬಳಿಯಲ್ಲಿ ನಡೆದ ಯುದ್ಧದಲ್ಲಿ ಮೈಸೂರಿಗೆ ಜಯವಾದ ದೃಶ್ಯವಿದ್ದು ಗಜಾರೋಹಿಗಳಾದ ಹೈದರ್ ಮತ್ತು ಟಿಪ್ಪು ಇಬ್ಬರೂ ತಮ್ಮ ತಮ್ಮ ಪಡೆಗಳನ್ನು ನಿರ್ದೇಶಿಸಿರುವಂತೆ ದೃಶ್ಯ, ಫ್ರೆಂಚ್ ಫಿರಂಗಿ ದಳ, ಮೈಸೂರು ದಂಡು ಕಾಪಾಡಲು ನಿಂತಿದೆ. ಕರ್ನಲ್ ಬೇಲಿಯನ್ನು ರಕ್ಷಿಸಲು ವ್ಯೂಹ ರಚಿಸಿರುವ ಬ್ರಿಟಿಷ್

ಸೈನಿಕರು. ಬೇಲಿ ಚಿಂತಾಗ್ರಸ್ತನಾಗಿರುವಂತೆ ಇರುವ ದೃಶ್ಯ ಮನೋಜ್ಞವಾಗಿದೆ. ಅಲ್ಲದೆ ದರಿಯಾದೌಲತ್ ಅರಮನೆಯ ಪೂರ್ವದಿಕ್ಕಿನ ಚಿತ್ತಿಯಲ್ಲಿ ಅನೇಕ ರಾಜರು, ನವಾಬರು ಮತ್ತು ಪಾಳೆಯಗಾರರನ್ನು ಚಿತ್ರಿಸಲಾಗಿದೆ. ಇಲ್ಲಿ ಚಿತ್ರದುರ್ಗದ ಮದಕರಿನಾಯಕನಿಂದ ಹಿಡಿದು ಕಿತ್ತೂರು ರಾಣಿ ಚೆನ್ನಮ್ಮ, ತಂಜಾವೂರು, ಕೊಡಗು, ಔಂಧ್, ಕರ್ಕಾಟ್, ಕಡಪ ಮೊದಲಾದ ಆಳರಸರ ಚಿತ್ರಗಳು ಇವೆ. ಶ್ರೀರಂಗಪಟ್ಟಣ ಬ್ರಿಟಿಷರ ವಶವಾದ ಮೇಲೆ ವೆಲ್ಲೆಸ್ಲಿ ಇಲ್ಲಿ ವಾಸಿಸುತ್ತಿದ್ದನೆಂದು ತಿಳಿದುಬರುತ್ತದೆ.[31] ಒಟ್ಟಾರೆ ಈ ಅರಮನೆ ಟಿಪ್ಪುವಿನ ಧೈರ್ಯ, ಸಾಹಸಗಳ, ಕಲಾಪ್ರೌಢಿಮೆಗಳ ಪ್ರತೀಕವಾಗಿದೆ ಎಂದು ಹೇಳಬಹುದು.

## ಗುಂಬಜ್

ಟಿಪ್ಪು ಕಟ್ಟಿಸಿದ ಮತ್ತೊಂದು ಕಟ್ಟಡವೆಂದರೆ ಗುಂಬಜ್. ಈ ಗುಂಬಜ್‌ನ್ನು ಟಿಪ್ಪು ಸುಲ್ತಾನನು 1784ರಲ್ಲಿ ಕಟ್ಟಿಸಿದ್ದಾನೆ. ಈ ಗುಂಬಜ್‌ನಲ್ಲಿ ಹೈದರ್ ಆಲಿ, ಟಿಪ್ಪುಸುಲ್ತಾನ್ ಮತ್ತು ಅವನ ತಾಯಿ ಫಾತಿಮಾ ಬೇಗಂ ಈ ಮೂರು ಜನರು ಸಮಾಧಿಗಳಿವೆ. ಹಾಗೂ ಗುಂಬಜ್‌ನ ಒಳಗೂ ಹಾಗೂ ಹೊರಗೂ ಟಿಪ್ಪುವಿನ ಸಂಬಂಧಿಗಳ ಸಮಾಧಿಗಳನ್ನು ಕಾಣಬಹುದು.

ಮೂರು ಬಾಗಿಲುಳ್ಳ ಈ ಕಟ್ಟಡವು 36 ಕೃಷ್ಣಶಿಲೆಯ ಕಂಬಗಳ ಆಧಾರದ ಮೇಲೆ ನಿಂತಿದೆ. ಈ ಕಟ್ಟಡದಲ್ಲಿ ಶಿಲೆ, ಇಟ್ಟಿಗೆ ಮತ್ತು ಗಾರೆಯನ್ನು ಹೇರಳವಾಗಿ ಬಳಸಲಾಗಿದೆ. ಈ ಕಟ್ಟಡದಲ್ಲಿ ಮೊಗಲರ, ಪರ್ಶಿಯನ್ನರ ಹಾಗೂ ಹಿಂದೂ ಕಲೆಯ ಪ್ರಭಾವವನ್ನು ಕಾಣಬಹುದಾಗಿದೆ. ಗುಂಬಜ್‌ನ ಹೊರಸುತ್ತಿನ ಮೇಲ್ಛಾವಣಿಯಲ್ಲಿ ಕಲ್ಲಿನ ಚಪ್ಪಡಿ ಮತ್ತು ಗಾರೆಯನ್ನು ಬಳಸಲಾಗಿದೆ. ಈ ವೈಶಿಷ್ಟತೆಯನ್ನು ನಾವು ಹಿಂದೂ ದೇವಾಲಯಗಳಲ್ಲೂ ಕಾಣಬಹುದು. ಗುಂಬಜ್‌ನ ಮೂರು ಬಾಗಿಲುಗಳೂ ಬೀಟೆ ಮರದಿಂದ ಮಾಡಿದುದಾಗಿಗದ್ದು, ದಂತ ಕಲಾಕುಶಲಿಗಳು ತಮ್ಮ ಪ್ರತಿಭೆಯನ್ನು ಬಾಗಿಲುಗಳ ಮೇಲೆ ಮಾಡಿರುವ ಕಲಾ ಕೌಶಲವನ್ನು ವ್ಯಕ್ತಪಡಿಸಿದ್ದಾರೆ.

ಡೂಮಿನ ಒಳಭಾಗವನ್ನು ಮೂರು ಹಂತವಾಗಿ ವಿಭಾಗಿಸಲಾಗಿದೆ. ಈ ಮೂರು ಹಂತಗಳಲ್ಲಿಯೂ ಟಿಪ್ಪು ಕಾಲದ ಕಲಾವಿದರು ಅದ್ದೂರಿ ವರ್ಣಗಳನ್ನು ಬಳಸಿ ಹುಲಿಯ ಬಣ್ಣಗಳನ್ನು ಚಮತ್ಕಾರವಾಗಿ ಅಲಂಕರಿಸುವಲ್ಲಿ ಯಶಸ್ವಿಯಾಗಿದ್ದಾರೆ. ಈ ಗುಮ್ಮಟವು ಟಿಪ್ಪು ಕಾಲದ ಕಲಾ ವೈಖರಿಯನ್ನು, ಚಿತ್ರಕಲೆಗೆ ಅವನು ನೀಡಿದ ಪ್ರೋತ್ಸಾಹವನ್ನು ಇಲ್ಲಿ ಕಾಣಬಹುದಾಗಿದೆ.

ಗುಂಬಜ್‌ನ ನಾಲ್ಕು ದಿಕ್ಕುಗಳಲ್ಲೂ ಒಂದೊಂದು "ಖಾನ್‌ಖಾನ" ಅಥವಾ ಮುಸಾಫಿರ್ ಖಾನ ಗಳನ್ನು ಕಟ್ಟಿಸಲಾಗಿದೆ. ಇವು ಯಾತ್ರಿಕರ ಮತ್ತು ಸಂದರ್ಶಕರ ಅನುಕೂಲಕ್ಕೆಂದು ಕಟ್ಟಿಸಲಾಗಿದೆ. ದಪ್ಪ ಕಂಬಗಳ ಹಾಗೂ ಅದಕ್ಕೆ ಸೇರಿಸಿರುವ ಕಮಾನುಗಳ ಆಧಾರದ ಮೇಲೆ ನಿಂತಿರುವ ಈ ಮುಸಾಫಿರ್ ಖಾನಾಗಳು ಮೊಗಲ್ ಕಲಾ ಶೈಲಿಯಲ್ಲಿ ರಚಿಸಿದ್ದರೂ, ದೇಶೀಯ ಕಲಾ ಪ್ರಭಾವಕ್ಕೆ ಒಳಗಾಗಿವೆ.

## ಮಸ್ಜಿದ್-ಎ-ಅಕ್ಸ್

ಈ ಮಸೀದಿಯನ್ನು ಟಿಪ್ಪುವು ಗುಂಬಜ್‌ನ ಪಶ್ಚಿಮ ದಿಕ್ಕಿನಲ್ಲಿ ಕಟ್ಟಿಸಿದ್ದಾನೆ. ಎಂಟು ಶಿಲಾಸ್ತಂಭ, ಏಳು ಬಾಗಿಲು, ಒಂದು ಒಳ ಮತ್ತು ಹೊರ ಸಭಾಂಗಣದಿಂದ ಕೂಡಿದೆ. ದೇಶೀಯ ಹಿಂದೂ ಕಲೆಯ ಪ್ರಭಾವವನ್ನು ನಾವಿಲ್ಲಿ ಕಾಣಬಹುದು. ಹೊರ ಸಭಾಂಗಣದ ಮೇಲ್ಛಾವಣಿಗೆ ಕಲ್ಲು ಚಪ್ಪಡಿಗಳನ್ನು ಉಪಯೋಗಿಸಲಾಗಿದೆ. ಇಲ್ಲಿನ ಕಮಾನು, ಮೆಹ್ರಬ್ ಮುಂತಾದವು ಟಿಪ್ಪು ಕಾಲದ ಕಲೆ ಮತ್ತು ಅವನ ಪರಮತ ಸಹಿಷ್ಣುತಾ ನೀತಿಯನ್ನು ಎತ್ತಿ ತೋರಿಸುತ್ತವೆ.

## ಮಸ್ಜಿದ್-ಎ-ಅಲ್ ಅಥವಾ ಜುಮ್ಮಾ ಮಸ್ಜಿದ್

ಟಿಪ್ಪುಸುಲ್ತಾನನು ಈ ಮಸೀದಿಯನ್ನು ಶ್ರೀರಂಗಪಟ್ಟಣದ ಕೋಟೆಯ ಒಳಗೆ 1787ರಲ್ಲಿ ಕಟ್ಟಿಸಿದ್ದಾನೆ. ಈ ಮಸೀದಿಯ ಕೆಳಗಿನ ಸ್ತರದಲ್ಲಿ ತೆರೆ ಶಾಲೆಗಳಿವೆ. ಅತ್ಯಂತ ಭವ್ಯ ಮತ್ತು ಸುಂದರವಾದ ಈ ಕಟ್ಟಡದ ಕಂಬಗಳು, ಮಿನಾರುಗಳೂ ಆಕರ್ಷಕವಾಗಿವೆ. ಈ ಎರಡು ಕಡೆ ಗಳಲ್ಲೂ ಒಂದೊಂದು ಮಿನಾರುಗಳಿದ್ದು ಒಳಗೆ ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ಇವುಗಳನ್ನು ಹತ್ತಿ ನೋಡಿದರೆ ಇಡೀ ಶ್ರೀರಂಗಪಟ್ಟಣವೇ ಎದ್ದು ಕಾಣುತ್ತದೆ. ಪ್ರಾಯಶಃ 'ಒಂದು ಬಾಣ ಎರಡು ಗುರಿ' ಎಂಬಂತೆ ಟಿಪ್ಪುವು ಈ ಮಿನಾರುಗಳನ್ನು ಭವ್ಯವಾಗಿ ಕಾಣುವಂತೆಯೂ, ದೂರದಲ್ಲಿ ಬರುವ ಶತ್ರುಗಳನ್ನು ವೀಕ್ಷಿಸುವುದಕ್ಕೆ ಅನುಕೂಲವಾಗುವಂತೆಯೂ ಕಟ್ಟಿಸಿದ್ದಿರಬಹುದು.

6 ಕಂಬಗಳು ಕಮಾನು ಮತ್ತು 7 ಬಾಗಿಲುಳ್ಳ ಈ ಕಟ್ಟಡದಲ್ಲಿ ಮೊಗಲ್ ತುರ್ಕಿ ಮತ್ತು ಬಿಜಾಪುರ ಸುಲ್ತಾನರ ಕಾಲದ ಕಲಾಶೈಲಿಯು ಅಡಕವಾಗಿದ್ದರೂ, ಅನೇಕ ಕಡೆ ಹಿಂದೂ ಪ್ರಭಾವಕ್ಕೆ ಒಳಗಾಗಿದೆ. ಈ ಕಟ್ಟಡದಲ್ಲಿ ಕಲ್ಲು, ಇಟ್ಟಿಗೆ ಮತ್ತು ಗಾರೆಯನ್ನು ಬಳಸಲಾಗಿದ್ದು, ಹೆಚ್ಚು ಕಡಿಮೆ ಈ ಕಟ್ಟಡವು ಹಿಂದೂ ಶೈಲಿಯಲ್ಲೇ ನಿರ್ಮಿತವಾಗಿದೆ. ಜೊತೆಗೆ ಮಸೀದಿಯ ಬಲ

ಭಾಗದಲ್ಲಿ ಪ್ರಾರ್ಥನೆಗೋಸ್ಕರ ನೀರು ತುಂಬುವುದಕ್ಕೆ 'ಹೌಜ್' (ಸಣ್ಣ ಕೊಳದ ಮಾದರಿ) ಕಟ್ಟಲ್ಪಟ್ಟಿದೆ. ಇದೂ ಕೂಡ ಹಿಂದೂ ಮಾದರಿಯಲ್ಲಿ ಕಲ್ಲಿನ ಚಪ್ಪಡಿಗಳನ್ನು ಬಳಸಿ ಪಾವಟಿಗೆ ಗಳೋಪಾದಿಯಲ್ಲಿ ಕಟ್ಟಲಾಗಿದೆ. ಇದರ ಬಗ್ಗೆ ಕೂಲಂಕುಷವಾಗಿ ಚರ್ಚಿಸಲು ಆಕರಗಳು ಲಭ್ಯ ವಿಲ್ಲದ ಕಾರಣ ನಾವು ಈ ಕೆಳಗಿನ ತೀರ್ಮಾನಕ್ಕೆ ಬರಬಹುದಾಗಿದೆ. ಟಿಪ್ಪುವು ಪರಮತ ಸಹಿಷ್ಣುತ ನಾಗಿದ್ದು, ಹೆಚ್ಚಾಗಿ ಹಿಂದೂ ಕೆಲಸಗಾರರು ಮತ್ತು ಶಿಲ್ಪಿಗಳನ್ನೇ ಬಳಸಿಕೊಂಡಿರುವುದರಿಂದ ಈ ಕಟ್ಟಡದಲ್ಲಿ ಇಂಡೋ-ಇಸ್ಲಾಮಿಕ್ ಶೈಲಿಯ ಮಿಶ್ರಣವನ್ನು ಕಾಣಬಹುದಾಗಿದೆ.

ಮೇಲಿನ ವಿವರಣೆಯಿಂದ ಕೆಲವು ಸಾಮಾನ್ಯ ತೀರ್ಮಾನಗಳನ್ನು ಮಾಡಬಹುದು. ಒಂದನೆಯದಾಗಿ, ಶ್ರೀರಂಗಪಟ್ಟಣವು ಸಾಂಸ್ಕೃತಿಕ ಕೇಂದ್ರವಾಗಿ ಕೆಲವು ಪ್ರಮುಖ ಮೌಲ್ಯಗಳನ್ನು ಪರಿಪೋಷಿಸಿತು. ವೈವಿಧ್ಯತೆಯಲ್ಲಿ ಏಕತೆ, ಸಹಬಾಳ್ವೆ ಮತ್ತು ಸಮನ್ವಯಗಳು ಅತಿಮುಖ್ಯವಾದ ಮೌಲ್ಯವಾಗಿದ್ದವು. ಉದಾ: ನವರಾತ್ರಿ ಹಬ್ಬ ನಾಡಹಬ್ಬವಾಗಿತ್ತು. ಎಲ್ಲಾ ಜನರ ಮತ್ತು ಜನಾಂಗಗಳ ಹಾಗೂ ವರ್ಗಗಳ ಹಬ್ಬ ಅದಾಗಿತ್ತು. ಅಂದರೆ ನವರಾತ್ರಿ ಸಾಂಸ್ಕೃತಿಕವಾಗಿ ಶ್ರೀರಂಗಪಟ್ಟಣದಲ್ಲಿ ಇಂತಹ ಸಾಂಸ್ಕೃತಿಕ ಭಾವೈಕ್ಯತೆಯನ್ನು ಮೂಡಿಸಿತ್ತು. ಎರಡನೆಯದಾಗಿ, ಶ್ರೀರಂಗಪಟ್ಟಣದದ ಸಾಂಸ್ಕೃತಿಕ ವಾತಾವರಣದಲ್ಲಿ ರಾಜರು, ದಳವಾಯಿಗಳು, ಸರ್ವಾಧಿಕಾರಿಗಳು ಮತ್ತು ಹೈದರಾಲಿ, ಟಿಪ್ಪುಸುಲ್ತಾನರು ಪ್ರಧಾನ ಪಾತ್ರ ವಹಿಸಿದರು. ಇಲ್ಲಿನ ಆಳರಸರು ಯಾವುದೇ ಪಂಥ, ಧರ್ಮ, ಜಾತಿ ಅಥವಾ ಜನಾಂಗಕ್ಕೆ ಸೇರಿದ್ದರೂ ಅವರೆಲ್ಲಾ ಬೆಂಬಲಿಸಿದ್ದು ಭಾರತೀಯ ಸಂಸ್ಕೃತಿಯನ್ನು ಎಂದು ಹೇಳಬಹುದು. ಮೂರನೆಯದಾಗಿ, ಇಲ್ಲಿನ ಸಾಂಸ್ಕೃತಿಕ ಚಟುವಟಿಕೆಗಳು ಜನರಿಗೆ ಮನ ರಂಜನೆ ಮತ್ತು ಮನೋವಿಕಾಸಕ್ಕೂ ಸಾಧನಗಳಾಗಿದ್ದವು. ಧಾರ್ಮಿಕ ಮೂಲದ ದೇವಾಲಯದ ಆಚರಣೆಗಳು, ಉತ್ಸವಗಳು, ಜಾತ್ರೆಗಳು ಜನರಿಗೆ ಸಂತೋಷವನ್ನು ಉಂಟು ಮಾಡುತ್ತಿದ್ದವು. ಜನರಿಗೆ ಸಂತೋಷವನ್ನು ಉಂಟು ಮಾಡುತ್ತಿದ್ದವು. ಶ್ರೀರಂಗಪಟ್ಟಣದ ಜನರು ಮಲ್ಲಯುದ್ಧ, ಪಗಡೆಯಾಟ, ಚೌಕಾಭಾರ ಮತ್ತು ಗಂಜೀಫಿನ ಆಟಗಳನ್ನು ಆಡುತ್ತಿದ್ದರು. ಮೂರನೇಯ ಕೃಷ್ಣ ರಾಜರು ರಚಿಸಿರುವ 'ಶ್ರೀ ತತ್ವನಿಧಿ'ಯು ಇಂತಹ ಅನೇಕ ಆಟಪಾಠಗಳನ್ನು ಪರಿಚಯಿಸುತ್ತದೆ. ಅರಮನೆಯಲ್ಲಿ ರಾಜಪರಿವಾರ, ಶ್ರೀಮಂತವರ್ಗ ಮತ್ತು ಇತರರು ಮನರಂಜನೆಗಾಗಿ ನಾನಾ ಪ್ರಕಾರದ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಅವುಗಳಲ್ಲಿ ಮುಖ್ಯವಾದವು ನೃತ್ಯ, ಸಂಗೀತ ಮತ್ತು ನಾಟಕ. ದೇವದಾಸಿಯರು ಶ್ರೀರಂಗಪಟ್ಟಣದಲ್ಲಿ ನೃತ್ಯ ಕಲೆಯನ್ನು ಪ್ರದರ್ಶಿಸುತ್ತಿದ್ದರು. ಮೂಗೂರು, ಚಾಮರಾಜನಗರ ಮೊದಲಾದ ಕೇಂದ್ರಗಳು ಇಂತಹ ಗಣಿಕಾ

ಸ್ತ್ರೀಯರ ಶಾಸ್ತ್ರ ಪಾಂಡಿತ್ಯಕ್ಕೆ ಪ್ರಸಿದ್ಧವಾಗಿದ್ದವು. ದೇವದಾಸಿಯರಿಗೆ ಶ್ರೀರಂಗಪಟ್ಟಣದ ಸಮಾಜದಲ್ಲಿ ಅವರ ಕಲಾನೈಪುಣ್ಯವನ್ನರಿತು ಅವರಿಗೆ ಉನ್ನತ ಸ್ಥಾನಮಾನಗಳನ್ನು ಅಂದಿನ ಸಮಾಜ ನೀಡಿದ್ದಿತು. ನಾಲ್ಕನೆಯದಾಗಿ, ಶ್ರೀರಂಗಪಟ್ಟಣದ ಸಂಸ್ಕೃತಿಯನ್ನು ಮೂರ್ತ ಸ್ವರೂಪದಲ್ಲಿ ಪ್ರತಿನಿಧಿಸುವ ವಾಸ್ತುಶಿಲ್ಪ, ವೈವಿಧ್ಯಮಯವಾಗಿದೆ. ಹಿಂದೂ ವಾಸ್ತುಶಿಲ್ಪದಲ್ಲಿ ದ್ರಾವಿಡ ಶೈಲಿಯ ಪ್ರಭಾವ ಎದ್ದು ಕಾಣುತ್ತದೆ. ಮುಸ್ಲಿಂ ಶೈಲಿಯ ಕಟ್ಟಡಗಳಲ್ಲಿ ಇಂಡೋ ಇಸ್ಲಾಮಿಕ್ ಪ್ರಭಾವ ಹೆಚ್ಚಾಗಿ ಗೋಚರಿಸುತ್ತದೆ. ಶ್ರೀರಂಗಪಟ್ಟಣದ ಕೋಟೆ ಜಲದುರ್ಗವಾಗಿದ್ದು ಅದೊಂದು ಸುವ್ಯವಸ್ಥಿತ ವಾದ ವಾಸ್ತುಶಿಲ್ಪ ಮಾದರಿ ಎಂದು ಹೇಳಬಹುದು. ಶ್ರೀರಂಗಪಟ್ಟಣದ ಚಿತ್ರಕಲೆಯು ಸಹ ಅಂದಿನ ಜನಜೀವನ, ಅಭಿರುಚಿ, ವೇಷಭೂಷಣ, ಸಾಹಸಪ್ರಿಯತೆ ಮೊದಲಾದ ವಿಷಯಗಳನ್ನು ದಾಖಲಿಸು ತ್ತವೆ. ಕೊನೆಯದಾಗಿ, ಶ್ರೀರಂಗಪಟ್ಟಣದ ಬೌದ್ಧಿಕ ವಾತಾವರಣ ಕವಿಗಳಿಗೆ ಮತ್ತು ಪಂಡಿತರುಗಳಿಗೆ ತುಂಬಾ ಅನುಕೂಲಕರವಾಗಿತ್ತು. ಒಟ್ಟಿನಲ್ಲಿ ಶ್ರೀರಂಗಪಟ್ಟಣದ ಸಾಂಸ್ಕೃತಿಕ ಜೀವನ ವೈವಿಧ್ಯಪೂರ್ಣ ವಾಗಿದ್ದು ಮನರಂಜನೆಗೂ ಮತ್ತು ಮನೋವಿಕಾಸಕ್ಕೂ ಸೂಕ್ತ ರೀತಿಯ ಪ್ರಚೋಧನೆಯನ್ನು ಕಲ್ಪಿಸಿಕೊಟ್ಟಿದ್ದಿತು.

## ಅಡಿಟಿಪ್ಪಣಿಗಳು

1) ಚಿಕ್ಕದೇವರಾಜ ವಂಶಾವಳಿ ಪು.113
2) ಅದೇ; ಪು.113, 158–160
3) ಕಂಠೀರವ ನರಸರಾಜ ವಿಜಯಂ. ಸಂಧಿ 7 ಪು.110, ಸಂಧಿ 9
4) ಅದೇ; ಸಂಧಿ 9 ಪು.56, 59, 64, 67, 98–100; ಸಂಧಿ 7 ಪು.109–110; ಸಂಧಿ 23 ಪ.22–23; 51–58
5) ಅದೇ; ಸಂಧಿ 23; ಪು.21–23, ಸಂಧಿ 25 ಪು.44–56
6) ಅದೇ; ಸಂಧಿ 23; ಪು. 41.50, 51–58, 64–74; ಸಂಧಿ 25, ಪು.106, 138
7) ಅದೇ; ಸಂಧಿ. 23, ಪು.26–41
8) ಅದೇ; ಸಂಧಿ 23, ಪು.65
9) ಅದೇ; ಸಂಧಿ 24, ಪು.49–87, ಸಂಧಿ 23, ಪ.78–107 ಸಂಧಿ, 25, ಪು.1–113
10) ಬಿ.ರಾಮಕೃಷ್ಣರಾವ್ - ಶ್ರೀ ಮನ್ಮಹಾರಾಜರವರ ವಂಶಾವಳಿ, ಭಾಗ–1, ಪುಟ 33–37
11) ಅದೇ, ಪುಟ 37–38
12) ಅದೇ; ಪುಟ 40
13) ಗೋವಿಂದ ವೈದ್ಯ – ಕಂಠೀರವ ನರಸರಾಜ ವಿಜಯ (ಸಂ) ಆರ್.ಶಾಮಶಾಸ್ತ್ರಿ ಕ.ಅ.ಸಂ. ಮೈಸೂರು 1971, ಸಂಧಿ 21, ಪ.1–24.
14) ಅದೇ; ಸಂಧಿ 21 ಪು.25–50, 66–69
15) ಶ್ರೀ ಮನ್ಮಹಾರಾಜರವರ ವಂಶಾವಳಿ ಭಾಗ–1, ಪು 88–89
16) ಗೋವಿಂದ ವೈದ್ಯ – ಕಂಠೀರವ ನರಸರಾಜ ವಿಜಯ (ಸಂ) ಆರ್.ಶಾಮಶಾಸ್ತ್ರಿ, ಸಂಧಿ 21, ಪು.89–91, 93, 95–98.
17) ಅದೇ; ಸಂಧಿ 21, ಪು. 90–132
18) ಅದೇ; ಸಂಧಿ 22, ಪು. 1–29
19) ಅದೇ; ಸಂಧಿ 22, ಪು. 52–86
20) ಅದೇ; ಸಂಧಿ 22, ಪು. 70–110
21) ಶ್ರೀ ಮನ್ಮಹಾರಾಜರವರ ವಂಶಾವಳಿ ಭಾಗ–1, ಪು. 255–262

22) ಗೋವಿಂದ ವೈದ್ಯ – ಕಂಠೀರವ ನರಸರಾಜ ವಿಜಯ (ಸೂ.ಆರ್.ಶಾಮಶಾಸ್ತ್ರಿ), ಸಂಧಿ 8 ಮತ್ತು 12.

23) ಅದೇ; ಸಂಧಿ 9–10

24) ಅದೇ; ಸಂಧಿ 9–10

25) ಎಡಕರ್ಳುಳ ಕೆ.ಶಂಕರನಾರಾಯಣ ಭಟ್ -- ಶ್ರೀ ಕಾವೇರಿ ವೈಭವ, ಭಾಗಮಂಡಲ 1978, ಪು.90

26) ಎಂ.ಹೆಚ್.ನಾಯಕ್–ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಮೈಸೂರು 1979 ಪು.1455

27) ಅದೇ; ಪುಟ 1455 ಮತ್ತು ಶ್ರೀ ಕಾವೇರಿ ವೈಭವ, ಪು.93

28) ಶ್ರೀ ಮನ್ಮಹಾರಾಜರವರ ವಂಶಾವಳಿ ಭಾಗ–1 ಪು. 90–93

29) ಅದೇ; ಪು. 89–91

30) ಶ್ರೀ ಕಾವೇರಿ ವೈಭವ ಪು. 94

31) Mysore Archelogical Report - 1935

# ಅಧ್ಯಾಯ-5
# ಉಪಸಂಹಾರ

ಇಲ್ಲಿಯವರೆಗಿನ ಅಧ್ಯಯನದಿಂದ ಒಟ್ಟಾರೆ ಮೂಡುವ ಕೆಲವು ಸಾಮಾನ್ಯ ತೀರ್ಮಾನಗಳನ್ನು ಇಲ್ಲಿ ನಿರೂಪಿಸಬಹುದು. ಒಂದನೆಯದಾಗಿ ಕರ್ನಾಟಕದ ಇತಿಹಾಸದಲ್ಲಿ ಶ್ರೀರಂಗಪಟ್ಟಣವು ಐತಿಹಾಸಿಕ ಕೇಂದ್ರವಾಗಿ ಮಾರ್ಪಟ್ಟಿತ್ತು. ಏಕೆಂದರೆ, ಶ್ರೀರಂಗಪಟ್ಟಣವು ಕನ್ನಡನಾಡಿನ ಇತಿಹಾಸದಲ್ಲಿ ತನ್ನದೇ ಆದ ವೈಶಿಷ್ಟ್ಯಗಳಿಂದ ಕೂಡಿ ಇತಿಹಾಸದಲ್ಲಿ ಮೆರೆದು ಇಂದೂ ಸಹ ಮುಸುಕಾಗಿದ್ದರೂ ತನ್ನತನವನ್ನು ಗಟ್ಟಿಯಾಗಿ ಅಲ್ಪಸ್ವಲ್ಪವಾದರೂ ಉಳಿಸಿಕೊಂಡು ಬಂದಿದೆ. ಅಲ್ಲದೆ ಸಾಂಸ್ಕೃತಿಕ ಬೆಳವಣಿಗೆಗೂ ಪೂರಕವಾದ ಕೇಂದ್ರವಾಗಿ ಮಾರ್ಪಟ್ಟಿದೆ. ಆದ್ದರಿಂದ ಶ್ರೀರಂಗಪಟ್ಟಣ ಇತಿಹಾಸ ಮತ್ತು ಸಂಸ್ಕೃತಿ ಎರಡನ್ನೂ ಸಮನ್ವಯಗೊಳಿಸಿತ್ತು. ಇದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಎರಡನೇ ಮತ್ತು ಮೂರನೇ ಐತಿಹಾಸಿಕ ದೃಷ್ಟಿಯಿಂದ ಶ್ರೀರಂಗಪಟ್ಟಣದ ಇತಿಹಾಸವನ್ನು ಅವಲೋಕಿಸಿದರೆ ಅದರ ವೈವಿಧ್ಯತೆ ಮತ್ತು ಸಂಕೀರ್ಣತೆಗಳು ಮನದಟ್ಟಾಗುತ್ತವೆ. ಒಂದು ಸ್ವಾರಸ್ಯದ ಸಂಗತಿ ಎಂದರೆ, ಹೊಯ್ಸಳರ ಕಾಲದಲ್ಲಿ ಶ್ರೀರಂಗಪಟ್ಟಣ ಒಂದು ರೀತಿಯಲ್ಲಿ ಅಸ್ಥಿತ್ವದಲ್ಲಿದ್ದರೂ ಸಹ ಬೇಲೂರು ಮತ್ತು ಹಳೇಬೀಡುಗಳಷ್ಟಿಲ್ಲದಿದ್ದರೂ, ತೊಣ್ಣೂರು, ಮೇಲುಕೋಟೆಗಳನ್ನಷ್ಟಾದರೂ ಖ್ಯಾತಿಯನ್ನು ಪಡೆದುಕೊಳ್ಳಲಿಲ್ಲ. ಆದರೆ ವಿಜಯನಗರದ ಅರಸರು ಇದರ ಆಯಾಕಟ್ಟಿನ ಸ್ಥಾನವನ್ನು ಗಮನಿಸಿ ಶ್ರೀರಂಗಪಟ್ಟಣವನ್ನು ರಾಜಕೀಯ ಕೇಂದ್ರವನ್ನಾಗಿ ಮಾಡಿಕೊಂಡರು. ಅದು ಅವರ ಕಾಲದಲ್ಲಿ ರಾಜಪ್ರತಿನಿಧಿಯ ರಾಜಕೀಯ ಕೇಂದ್ರವಾಗಿತ್ತು. ವಿಜಯನಗರದ ಅವನತಿಯ ನಂತರ ಒಡೆಯರ ಕಾಲದಲ್ಲಿ ಹಂತಹಂತವಾಗಿ ಶ್ರೀರಂಗಪಟ್ಟಣದ ರಾಜಕೀಯ ಪ್ರಾಮುಖ್ಯತೆ ಬೆಳೆಯುತ್ತಾ ಹೋಯಿತು. ರಾಜ ಒಡೆಯರು ಶ್ರೀರಂಗಪಟ್ಟಣವನ್ನು ಗೆದ್ದಾಗ ಅದು ಕೇವಲ 33 ಹಳ್ಳಿಗಳುಳ್ಳ ರಾಜ್ಯದ ಕೇಂದ್ರವಾಗಿತ್ತು. ಆದರೆ 1800ರ ಹೊತ್ತಿಗೆ ಶ್ರೀರಂಗಪಟ್ಟಣ ರಾಜಕೀಯವಾಗಿ ಅಂತರ ರಾಷ್ಟ್ರೀಯ ಭೂಪಟದಲ್ಲಿ ಸೇರಿಹೋಯಿತು. ಇಂತಹ ಸ್ಥಾನವನ್ನು ಶ್ರೀರಂಗಪಟ್ಟಣಕ್ಕೆ ಗಳಿಸಿಕೊಡುವುದರಲ್ಲಿ ಪ್ರಧಾನ ಪಾತ್ರ ವಹಿಸಿದ ವ್ಯಕ್ತಿಗಳೆಂದರೆ, ಕಂಠೀರವ ನರಸರಾಜ ಒಡೆಯರ್, ದೊಡ್ಡ ದೇವರಾಜ ಒಡೆಯರ್, ಚಿಕ್ಕದೇವರಾಜ ಒಡೆಯರ್, ಕಳಲೆ ಮನೆತನದ ದಳವಾಯಿಗಳಾದ ದೇವರಾಜಯ್ಯ, ನಂಜರಾಜಯ್ಯ, ಹೈದರಾಲಿ, ಟಿಪ್ಪುಸುಲ್ತಾನರು ಮುಖ್ಯರು.

ಇವರೆಲ್ಲರೂ ಆಯಾಕಟ್ಟಿನ ಸ್ಥಾನದಲ್ಲಿ ಶ್ರೀರಂಗಪಟ್ಟಣವನ್ನು ಅಂದಿನ ರಾಜಕೀಯದಲ್ಲಿ ಕುಖ್ಯಾತಿಯ ಹೆಸರು ತಂದುಕೊಡುವಲ್ಲಿ ಪ್ರಮುಖ ಪಾತ್ರ ವಹಿಸಿದರು.

ನಾಲ್ಕನೆಯದಾಗಿ, ಶ್ರೀರಂಗಪಟ್ಟಣವು ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಕೂಡ ಪ್ರಮುಖ ಪಾತ್ರ ವಹಿಸಿತು ಮತ್ತು ಶ್ರೀರಂಗಪಟ್ಟಣವು ಸಾಂಸ್ಕೃತಿಕ ಕೇಂದ್ರವಾಗಿ ಪ್ರಮುಖ ಮೌಲ್ಯಗಳನ್ನು ಪರಿಪೋಷಿಸಿತು. ವೈವಿಧ್ಯತೆಯಲ್ಲಿ ಏಕತೆ, ಸಹನೆ, ಸಹಬಾಳ್ವೆ ಮತ್ತು ಸಮನ್ವಯಗಳು ಅತಿ ಮುಖ್ಯವಾದ ಮೌಲ್ಯಗಳಾಗಿದ್ದವು. ಉದಾ: ನವರಾತ್ರಿ ಹಬ್ಬ ನಾಡಹಬ್ಬವಾಗಿತ್ತು. ಅಲ್ಲಿ ಜನರ ಮತ್ತು ಜನಾಂಗಗಳ ಹಾಗೂ ಎಲ್ಲಾ ವರ್ಗಗಳ ಹಬ್ಬವಾಗಿತ್ತು. ಅಂದರೆ ನವರಾತ್ರಿ ಸಾಂಸ್ಕೃತಿಕವಾಗಿ ಶ್ರೀರಂಗಪಟ್ಟಣದಲ್ಲಿ ಇಂತಹ ಸಾಂಸ್ಕೃತಿಕ ಭಾವೈಕ್ಯತೆಯನ್ನು ಮೂಡಿಸಿತು.

ಶ್ರೀರಂಗಪಟ್ಟಣದ ಸಾಂಸ್ಕೃತಿಕ ವಾತಾವರಣದಲ್ಲಿ ರಾಜರು, ದಳವಾಯಿಗಳು ಸರ್ವಾಧಿಕಾರಿ ಗಳ ಮತ್ತು ಹೈದರಾಲಿ ಹಾಗೂ ಟಿಪ್ಪುಸುಲ್ತಾನರುಗಳು ಪ್ರಧಾನ ಪಾತ್ರ ವಹಿಸಿದರು. ಇಲ್ಲಿನ ಆಳರಸರು ಯಾವುದೇ ಪಂಥ, ಧರ್ಮ, ಜಾತಿ ಅಥವಾ ಜನಾಂಗಕ್ಕೆ ಸೇರಿದ್ದರೂ ಅವರೆಲ್ಲರೂ ಬೆಂಬಲಿಸಿದ್ದು ಭಾರತೀಯ ಸಂಸ್ಕೃತಿಯನ್ನು ಎಂದು ಹೇಳಬಹುದು. ಶ್ರೀರಂಗಪಟ್ಟಣದ ಸಾಂಸ್ಕೃತಿಕ ಚಟುವಟಿಕೆಗಳು ಜನರಿಗೆ ಮನರಂಜನೆ ಮತ್ತು ಮನೋವಿಕಾಸಕ್ಕೆ ಸಾಧನಗಳಾಗಿದ್ದವು. ಧಾರ್ಮಿಕ ಮೂಲದ ದೇವಾಲಯದ ಆಚರಣೆಗಳು, ಉತ್ಸವಗಳು, ಜಾತ್ರೆಗಳು, ಜನರಿಗೆ ಸಂತೋಷವನ್ನು ಉಂಟು ಮಾಡುತ್ತಿದ್ದವು. ಶ್ರೀರಂಗಪಟ್ಟಣದ ಜನರು ಮಲ್ಲಯುದ್ಧ, ಪಗಡೆಯಾಟ, ಚೌಕಾಭಾರ ಮತ್ತು ಗಂಜೀಫಿನ ಆಟಗಳನ್ನು ಆಡುತ್ತಿದ್ದರು. 3ನೇ ಕೃಷ್ಣರಾಜ ಒಡೆಯರು ರಚಿಸಿರುವ 'ಶ್ರೀ ತತ್ವನಿಧಿ'ಯು ಇಂತಹ ಅನೇಕ ಆಟಪಾಠಗಳನ್ನು ಪರಿಚಯಿಸುತ್ತದೆ. ಅರಮನೆಯಲ್ಲಿ ರಾಜ ಪರಿಹಾರ, ಶ್ರೀಮಂತವರ್ಗ ಮತ್ತು ಇತರರು ಮನರಂಜನೆಗಾಗಿ ನಾನಾ ಪ್ರಕಾರದ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಇವುಗಳಲ್ಲಿ ಮುಖ್ಯವಾದವು ನೃತ್ಯ, ಸಂಗೀತ ಮತ್ತು ನಾಟಕ. ದೇವದಾಸಿಯರು ಶ್ರೀರಂಗಪಟ್ಟಣದಲ್ಲಿ ನೃತ್ಯ ಕಲೆಯನ್ನು ಪ್ರದರ್ಶಿಸುತ್ತಿದ್ದರು. ಮೂಗೂರು, ಚಾಮರಾಜನಗರ ಮೊದಲಾದ ಕೇಂದ್ರಗಳು ಇಂತಹ ಗಣಿಕಾ ಸ್ತ್ರೀಯರ ಶಾಸ್ತ್ರ ಪಾಂಡಿತ್ಯಕ್ಕೆ ಪ್ರಸಿದ್ಧವಾಗಿದ್ದವು. ದೇವದಾಸಿಯರಿಗೆ ಶ್ರೀರಂಗಪಟ್ಟಣದ ಸಮಾಜದಲ್ಲಿ ಅವರ ಕಲಾ ನೈಪುಣ್ಯವನ್ನು ಗಮನಿಸಿ ಅವರಿಗೆ ಉನ್ನತ ಸ್ಥಾನಮಾನಗಳನ್ನು ಅಂದಿನ ಸಮಾಜ ನೀಡಿದ್ದಿತು.

ಶ್ರೀರಂಗಪಟ್ಟಣದ ಸಂಸ್ಕೃತಿಯನ್ನು ಮೂರ್ತಸ್ವರೂಪದಲ್ಲಿ ಪ್ರತಿಪಾದಿಸುವ ವಾಸ್ತುಶಿಲ್ಪ ವೈವಿಧ್ಯಮಯವಾಗಿದೆ. ಹಿಂದೂ ವಾಸ್ತುಶಿಲ್ಪದಲ್ಲಿ ದ್ರಾವಿಡ ಶೈಲಿಯ ಪ್ರಭಾವ ಎದ್ದು ಕಾಣುತ್ತದೆ. ಶ್ರೀರಂಗನಾಥ ದೇವಾಲಯ ಇದಕ್ಕೊಂದು ಉದಾಹರಣೆ. ಮುಸ್ಲಿಂ ಶೈಲಿನ ಕಟ್ಟಡಗಳಲ್ಲಿ ಇಂಡೋ ಇಸ್ಲಾಮಿಕ್ ಪ್ರಭಾವ ಹೆಚ್ಚಾಗಿ ಗೋಚರಿಸುತ್ತದೆ. ಶ್ರೀರಂಗಪಟ್ಟಣದ ಕೋಟೆ ಸುವ್ಯವಸ್ಥಿತವಾದ ವಾಸ್ತುಶಿಲ್ಪ ಮಾದರಿ ಎಂದು ಹೇಳಬಹುದು. ಶ್ರೀರಂಗಪಟ್ಟಣದ ಚಿತ್ರಕಲೆಯು ಸಹ ಅಂದಿನ ಜನ ಜೀವನ, ಅಭಿರುಚಿ, ವೇಷಭೂಷಣ, ಸಾಹಸಪ್ರಿಯತೆ ಮೊದಲಾದ ವಿಷಯಗಳನ್ನು ದಾಖಲಿಸುತ್ತದೆ. ಒಟ್ಟಿನಲ್ಲಿ ಶ್ರೀರಂಗಪಟ್ಟಣದ ಸಾಂಸ್ಕೃತಿಕ ಜೀವನ ವೈವಿಧ್ಯಪೂರ್ಣವಾಗಿದ್ದು, ಮನರಂಜನೆಗೂ ಮತ್ತು ಮನೋವಿಕಾಸಕ್ಕೂ ಸೂಕ್ತವೆಂದು ಪ್ರಚೋದನೆಯನ್ನು ಕಲ್ಪಿಸಿಕೊಟ್ಟಿದ್ದಿತು.

ಒಟ್ಟಿನಲ್ಲಿ ಶ್ರೀರಂಗಪಟ್ಟಣವು ಐತಿಹಾಸಿಕ ಕೇಂದ್ರವಾಗಿ ವಿವಿಧ ರಾಜಮನೆತನಗಳ ನೆಲೆಯಾಗಿ, ಸಮಾಜದ ಎಲ್ಲಾ ರಂಗಗಳಲ್ಲಿ ವೈವಿಧ್ಯತೆಯಲ್ಲಿ ಏಕತೆ ಎಂಬ ತತ್ವವನ್ನು ಶ್ರೀರಂಗ ಪಟ್ಟಣವು ಕರ್ನಾಟಕದ ಇತಿಹಾಸದಲ್ಲಿ ಎತ್ತಿ ಹಿಡಿಯುತ್ತ ಭಾರತೀಯ ಸಂಸ್ಕೃತಿಯು ಪ್ರತಿಪಾದಿಸಿದ ಪರಮತ ಸಹಿಷ್ಣುತೆ ಹಾಗೂ ಸಹಬಾಳ್ವೆಯ ತತ್ವಗಳನ್ನು ಇದು ರಕ್ಷಿಸಿ ಬೆಳೆಸಿತೆನ್ನಬಹುದು. ಇದೇ ಶ್ರೀರಂಗಪಟ್ಟಣದ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಚಟುಟಿಕೆಗಳ ಅಧ್ಯಯನದಿಂದ ಒಡಮೂಡುವ ಸಾಮಾನ್ಯ ತೀರ್ಮಾನ ಎಂದು ಹೇಳಬಹುದು.

# ಆಧಾರಗ್ರಂಥಗಳು


## 1) ಪ್ರಾಥಮಿಕ ಆಧಾರಗಳು

1) ಎಫಿಗ್ರಾಫಿಯ ಕರ್ನಾಟಕ ಸಂ.6 (ಎನ್.ಎಸ್) (ಪರಿಷ್ಕೃತ) ಮೈಸೂರು 1977.

2) ಮೈಸೂರು ಪುರಾತತ್ವ ಇಲಾಖೆಯ ವರದಿ 1908–1941

3) ಮದ್ರಾಸು ಎಫಿಗ್ರಾಫಿಸ್ಟ್ಸ ವರದಿ 1910–1938

4) ರೈಸ ಬಿ.ಎಲ್. ಎಫಿಗ್ರಾಫಿಯಾ ಆಫ್ ಕರ್ನಾಟಕ ಸಂ. 1–12, ಬೆಂಗಳೂರು 1904

## 2) ಅಪ್ರಕಟಿತ ಸಮಕಾಲೀನ ಗ್ರಂಥಗಳು

1) ಚಿಕ್ಕದೇವರು – ಚಿಕ್ಕದೇವರಾಜ ಸಪ್ತಪದಿ (ಎಂ.ಎಸ್.ನಂ.ಬಿ.67ಪಿ) ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು

2) ಚಿಕ್ಕದೇವರಾಜ – ಚಿಕ್ಕದೇವರಾಜ ಭಿನ್ನಪಂ (ಎಂ.ಎಸ್. ನಂ.32) ಪ್ರಾ.ವಿ.ಸಂ. ಮೈಸೂರು, ಕರ್ನಾಟಕ ಕವಿಚರಿತೆ 455, 457–455.

3) ಚಿಕ್ಕದೇವರಾಜ – ಗೀತಾಗೋಪಾಲ (ಎಂ.ಎಸ್.ನಂ.ಎ749ಪಿ) ಪ್ರಾ.ವಿ.ಸಂ. ಮೈಸೂರು

4) ಚಿದಾನಂದ – ಮುನಿವಂಶಾಭ್ಯುದಯ (ಎಂ.ಎಸ್.ನಂ.ಎ.198ಪಿ) ಪ್ರಾ.ವಿ.ಸಂ. ಮೈಸೂರು

5) ಚಿಕ್ಕೋಪಾಧ್ಯಾಯ (1678–1680) – ಕಮಲಾಚಲ ಮಹಾತ್ಮೆ (1672) (ನಂ.ಕೆ.ಬಿ.38) ಪ್ರಾ.ವಿ.ಸಂ. ಮೈಸೂರು

6) ಚಿಕ್ಕೋಪಾಧ್ಯಾಯ – ಹಸ್ತಗಿರಿ ಮಹಾತ್ಮೆ (ಎಂ.ಎಸ್.ನಂ. ಬಿ.61 ಪಿ) ಪ್ರಾ.ವಿ.ಸಂ. ಮೈಸೂರು.

7) ಚಿಕ್ಕೋಪಾಧ್ಯಾಯ – ವೆಂಕಟಗಿರಿ ಮಹಾತ್ಮೆ (ಎಂ.ಎಸ್.ನಂ. 18–4–18 ಪಿ.2) ಓರಿಯಂಟಲ್ ಲೈಬ್ರರಿ ಮದ್ರಾಸು

8) ಚಿಕ್ಕೋಪಾಧ್ಯಾಯ – ಶ್ರೀರಂಗ ಮಹಾತ್ಮೆ (ಎಂ.ಎಸ್. ನಂ.ಬಿ.270 ಪಿ) ಪ್ರಾ.ವಿ.ಸಂ. ಮೈಸೂರು

9) ಚಿಕ್ಕೋಪಾಧ್ಯಾಯ – ಪಶ್ಚಿಮರಂಗ ಮಹಾತ್ಮೆ (ಎಂ.ಎಸ್. ನಂ.18–6–11) ಓರಿಯಂಟಲ್ ಲೈಬ್ರರಿ ಮದ್ರಾಸ್

10) ಚಿಕ್ಕೋಪಾಧ್ಯಾಯ - ಯಾದವಗಿರಿ ಮಹಾತ್ಮೆ (ಎಂ.ಎಸ್. 18-21- 16 ಪಿ.2) ಓರಿಯಂಟಲ್ ಲೈಬ್ರರಿ ಮದ್ರಾಸ್

11) ತಿರುಮಲಾರಾಯ - ಚಿಕ್ಕದೇವರಾಜ ವಂಶಾವಳಿ (ಎಂ.ಎಸ್.ನಂ.1035 ಪ್ರಾ.ವಿ.ಸಂ. ಮೈಸೂರು ಕರ್ನಾಟಕ ಕವಿಚರಿತೆ 11, 461 469-1465

12) ತಿರುಮಲರಾಯ - ಚಿಕ್ಕದೇವರಾಜ ವಿಜಯಂ (ಎಂ.ಎಸ್.ನಂ.137) ಪ್ರಾ.ವಿ.ಸಂ. ಮೈಸೂರು

13) ತಿರುಮಲರಾಯ - ಅಪ್ರತಿಮ ವೀರಚರಿತಂ (ಎಂ.ಎಸ್.ನಂ.109) ಪ್ರಾ.ವಿ.ಸಂ. ಮೈಸೂರು

14) ಮಲ್ಲಿಕಾರ್ಜುನ - ಶ್ರೀರಂಗ ಮಹಾತ್ಮೆ (1678) (ಎಂ.ಎಸ್.ನಂ. ಬಿ.52 ಪಿ) ಪ್ರಾ.ವಿ.ಸಂ. ಮೈಸೂರು

15) ಶ್ರೀರಂಗಪಟ್ಟಣ ಚರಿತೆ - (ಎಂ.ಎಸ್.ನಂ. ಕೆ.ಬಿ.25) ಪ್ರಾ.ವಿ.ಸಂ. ಮೈಸೂರು

## ಇತ್ತೀಚಿನ ಗ್ರಂಥಗಳು (ಸಮಕಾಲೀನ ಗ್ರಂಥಗಳು)

1) ಕಳಲೆ ಅರಸುಗಳ ವಂಶಾವಳಿ ಅಥವಾ ವೇಣುಪುರ ಕ್ಷತ್ರಿಗಳ ವಂಶಾವಳಿ (1830) (ಎಂ.ಎಸ್.ನಂ. ಬಿ.424 ಪಿ) ಪ್ರಾ.ವಿ.ಸಂ. ಮೈಸೂರು

2) ದೇವಚಂದ್ರ – ರಾಜಾವಳಿ ಕಥೆ (1830) (ಎಂ.ಎಸ್.ನಂ. ಕೆ.ಎ.65)

3) ನೂರೊಂದ - ಸುಂದರ ಕಾವ್ಯ (1740) (ಎಂ.ಎಸ್.ನಂ. ಬಿ. 285 ಪಿ) ಪ್ರಾ.ವಿ.ಸಂ. ಮೈಸೂರು

4) ಮೈಸೂರು ದೊರೆಗಳ ಪೂರ್ವ ವಂಶಾಭ್ಯುದಯ ವಿವರ (ಎಂ.ಎಸ್. ನಂ. ಕೆ.ಎ.273) ಪ್ರಾ.ವಿ.ಸಂ. ಮೈಸೂರು

5) ಮೈಸೂರು ದೊರೆಗಳ ಪೂರ್ವಾಭ್ಯುದಯ ವಿವರ (1714) ಮದ್ರಾಸು ಓರಿಯಂಟಲ್ ಲೈಬ್ರಿ ಹಸ್ತಪ್ರತಿಗಳ ಸಂಗ್ರಹದಲ್ಲಿರುವ ಮೆಕಂಜಿ ಹಸ್ತಪ್ರತಿ.

6) ಮೈಸೂರು ದೊರೆಗಳ ವಂಶಾವಳಿ (1800 (ಎಂ.ಎಸ್.ನಂ. 336 ಪಿ)

## ಸಮಕಾಲೀನ ಸಾಹಿತ್ಯ ಪ್ರಕಟಿತ ಗ್ರಂಥಗಳು


| | | |
|---|---|---|
| 1) | ಅನಂತರಾಮು ಕೆ. | ಸಕ್ಕರೆಯ ಸೀಮೆ ಮೈಸೂರು 1982 |
| 2) | ಗೋವಿಂದ ವೈದ್ಯ | ಕಂಠೀರವ ನರಸರಾಜ ವಿಜಯ (1648) (ಸಂ) ಶಾ.ಶಾಸ್ತ್ರಿ ಕ.ಅ.ಸಂ. ಮೈಸೂರು 1971 |
| 3) | ಚಿಕ್ಕದೇವರಾಜ | ಚಿಕ್ಕದೇವರಾಜ ಭಿನ್ನಪಂ (1700) ಕರ್ನಾಟಕ ಕಾವ್ಯ ಕಲಾನಿಧಿ ಮಾಲೆ, ಸಂಖ್ಯೆ 15 ಮೈಸೂರು 1905 |
| 4) | ಚಿದಾನಂದ ಕವಿ | ಮುನಿ ವಂಶಾಭ್ಯುದಯಂ (1680) |
| 5) | ತಿರುಮಲರಾಯ | ಚಿಕ್ಕದೇವರಾಜ ವಂಶಾವಳಿ (1680) ಕರ್ನಾಟಕ ಕಾವ್ಯಾನಿಧಿ ಪ್ರಕಟಣೆ, ಮೈಸೂರು 1919 ಮತ್ತು ಕರ್ನಾಟಕ ಕಾವ್ಯ ಮಂಜರಿ (ಮಾಲೆ) ಸಂಖ್ಯೆ 13, ಮೈಸೂರು 1895 |
| 6) | ತಿರುಮಲರಾಯ | ಚಿಕ್ಕದೇವರಾಜ ವಿಜಯಂ (1686) ಕರ್ನಾಟಕ ಕಾವ್ಯಮಾಲೆ, ಸಂಖ್ಯೆ 17 ಮೈಸೂರು 1895 |
| 7) | ತಿರುಮಲರಾಯ | ಅಪ್ರತಿಮ ವೀರಚರಿತಂ (1700) ಕರ್ನಾಟಕ ಕಾವ್ಯಮಾಲೆ, ದ್ವಿತೀಯ ಮುದ್ರಣ, ಮೈಸೂರು 1931 |
| 8) | ನರಸಿಂಹಾಚಾರ್ ಆರ್ | ಕರ್ನಾಟಕ ಕವಿಚರಿತೆ, ಸಂಖ್ಯೆ 2 ಮತ್ತು 3, ಬೆಂಗಳೂರು 1919, 1929 |
| 9) | ನಾಯಕ ಹಾ.ಮಾ | ಮುಮ್ಮಡಿ ಕೃಷ್ಣರಾಜ ಒಡೆಯರು |
| 10) | ನಂಜಮ್ಮಣಿ ಎಂ. | ಅರಸು ಜನಾಂಗ ಒಂದು ಅಧ್ಯಯನ ಮೈಸೂರು 1986 |
| 11) | ರಾಮಕೃಷ್ಣರಾವ್ ಬಿ. | ಶ್ರೀ ಮನ್ಮಹರಾಜ ವಂಶಾವಳಿ ಭಾಗ 1,2 ಮೈಸೂರು ಸರ್ಕಾರ 1961 |
| 12) | ಬೆಟಗೇರಿ ಕೃಷ್ಣಶರ್ಮ | ಕರ್ನಾಟಕ ಜನಜೀವನ, ಧಾರವಾಡ 1955 |
| 13) | ರಾಜರತ್ನಂ ಜೆ.ಪಿ | ನಮ್ಮ ಒಡೆಯರ ಕಥೆಗಳು, 1924 |
| 14) | ಲಿಂಗಣ್ಣ ಕವಿ | ಕೆಳದಿ ನೃಪಂ ವಿಜಯ (1800) ಪ್ರಾ.ವಿ.ಸಂ. ಕನ್ನಡ ಕಾವ್ಯ ಮಾಲೆ ಸಂಖ್ಯೆ 9, ಮೈಸೂರು |
| 15) | ಸೋಸಲೆ ಅಯ್ಯಶಾಸ್ತ್ರಿ | ಮೈಸೂರು ಮಹಾರಾಜ ಚರಿತ್ರೆ, ಧಾರವಾಡ 1976 |

| | | |
|---|---|---|
| 16) | ಶಿಂಗ್ರಯ್ಯ ಎಂ.ಡಿ | ಚಾಮರಾಜ ಒಡೆಯರವರ ಚರಿತ್ರೆ, ಮೈಸೂರು–1905 |
| 17) | ಶ್ರೀರಂಗ | ಗೌತಮನ ಶಾಪ, ತಿಪಟೂರು 1962 |
| 18) | ಸಾಲೆ, ತೂರೆ ಬಿ.ಎ. ಮತ್ತು ದೇಸಾಯಿ | ಕನ್ನಡನಾಡಿನ ಚರಿತ್ರೆ ಭಾಗ–1, ಅಮೃತ ಮಹೋತ್ಸವ ಮಾಲೆ 23 |

**ಸಂಪಾದನಾ ಗ್ರಂಥಗಳು**

1) ಶಿವಣ್ಣ ಕೆ.ಎಸ್. – ಕಳಲೆ ಮನೆತನದ ವೀರಶೈವ ದಳವಾಯಿಗಳು ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು –1994.
2) ಸಂಪದ್ಗಿರಿರಾವ್ – ಕರ್ನಾಟಕ ಪರಂಪರೆ ಸಂ.2, ಮೈಸೂರು ರಾಜ್ಯ ಸರ್ಕಾರ, ಬೆಂಗಳೂರು–1970.

**ಮಾಧ್ಯಮಿಕ ಆಧಾರಗಳು**

| | | |
|---|---|---|
| 1) | Rice B.L. | Mysore Gezzetter Vol. I, II West Minister, London, 1897 |
| 2) | Hayavadhana Rao C | Mysore Gazzetteer Vol. 11, Bangalore 1930 |
| 3) | Mandya District Gazzetteer Vol. | |

## Secondary Soruces

### A. Books

| | | |
|---|---|---|
| 1) | Abbe J. Dubois | Hindu Manners, customs and ceremonies, translates by H.K. Beauchamp, Oxford, 1897 |
| 2) | Aiyangar, Narayana and Srinivasachar | The Mysore Pradhans, Madras, 1902 |
| 3) | Aiyar, Sami Venkatadri | Bettada Arasu (Kannada) |

| | | |
|---|---|---|
| 4) | Aiyar R | History of the Nayaks of Madura, 1924 |
| 5) | Aiyangar S, Krishnaswami | Ancient India and South Indian History and Culture with Introduction by V.A.Smith, 1915 – Ancient |
| | Aiyangar S, Krishnaswami | The soruces of Vijayanagar History, Madras, 1919 |
| 6) | Ali B. Sheik | British Relations with Haidar Ali |
| | | Foreign policy of Tippu Sultan |
| | | Tipu Sultan A study in diplomacy and confrontation, Mysore 1982 |
| | | Tipu Sultan (Kannada) |
| 7) | Ali B. Sheik | The Hoysala Dynasty University 8 Mysore, 1972 |
| 8) | Archer Hidred | Early views of India The picturesque tourneys of Thomas and William Doriell, 1786-1794. |
| 9) | Basavaraj, L | Tirumalarya Mattu Chika Devaraja Wodeyar (Kannada) Karnatak University, Dharwad, 1972 |
| 10) | Betigeri Krishna Sharma | Karnataka Jana Jivaria, Samaja Pustakalaya Dharwad, 1971 |
| 11) | Bowring, B. Lewin | Hyder Ali and Tipu Sultan and the struggle with the Mussalman powers of the south, Oxford, 1893 |
| 12) | Buchanan Francis | A journey from Madras through the countries of Mysore, Canara and Malabar, 3 vols. |
| 13) | Burgess James | The chronology of Indian History – Medival and Modern Cosmo Publications, Delhi 6, 1972 |

| | | |
|---|---|---|
| 14) | Chitnis K.N | Keladi Polity, Karnataka University, Dharwad, 1874 |
| 15) | Crisp, B | The Mysore Revenue Regulations Translated form the Persian, Calcutta 9, 1792 |
| 16) | Dikshit, G.S | Studies in Keladi History, (Ed) |
| 17) | Dikshit, G.S | Local Self Government in medieval Karantaka, Dharwad 1964 |
| 18) | Dodwell | Catalogue of the Madras records, 1740-44, Madras, 1917 |
| 19) | Elliot and Dowson | The History of India as told by its own Historians, 8 volumes, London, 1867-1877 |
| 20) | Firishts Muhammad Khasim | History of the rise of the Mahamadan power in India, 1612. translated from the original Persian by John Briggs |
| 21) | Grant duff | A History of the Marathas, 2 vols, 1921 |
| 22) | Hayavadana Rao. C | History of Mysore, 3 vols, Bangalore, 1943 |
| 23) | Hayavadana Rao. C | Mysore Gezetteer, vol. ii, part iv |
| 24) | Heras | The Aravidu Dynasty of Vijayanagar, Madras, 1927 |
| 25) | Ismail B.K | Karnataka Temples and their role in socio economic life, Delhi, 1984 |
| 26) | JOIS, K. Gunda | Keladiya Sankshipta Itihasa (Kannda) 1963 |
| 27) | Josyer G.R. | History of Mysore under the Yadava Dynasty |
| 28) | Kane, P.V. | History of Dharmasastra, 5 vols, |
| 29) | Krishna Bhatt | The Dalvoy Family of Mysore |

| | | |
|---|---|---|
| 30) | Krishna Rao M.V | Karnataka Charitre B'lore 1959 |
| 31) | Krishna Rao P | A brief history of Mysore from the origin of the house of Mysore primises upto the death of Tipu Sultan |
| 32) | Miles, W | The History of Haider Naik (Translation of Meer Hussain Alikhan Kirmani's Nishan-e-Haidari) |
| 33) | Muddachari, B | The Mysore Maratha Relations in the 17 century, University of Mysore, 1969 |
| 34) | Muddachari B | Resistance of Mysore to the Maratha Expansion in the 18th Century |
| 35) | Mugali R.S. | History of Kannada Literature Mysore, 1964 |
| 36) | Mugali, R.S. | The Heritage of Karnataka, B'lore 1946 |
| 37) | Muthuna I.M | History of Karnataka, Mysore 1962 |
| 38) | Nagana Gowda | Pravasi Kanda Bharta |
| 39) | Puttana M.S. | Palyagars of Critradurga<br>- History of Ikkeri<br>- Pelegars of Hargalavadi B'lore 1931 |
| 40) | Rao, S.R. and Sastri, B.R.K | Traditional paintings of Karnataka Publ, Karnataka Chitrakala Parishath, B'lore 1980 |
| 41) | Rice Lewis | Mysore and Coorg from the Inscriptions, London, 1909 |
| | Rice Lewis | Mysore Gazetteer, 2 vols. |
| 42) | Salitore, B.A. | Social and Political Life in the Vijayanagar Empire, Vol.i & ii, Madras, 1934 |
| 43) | Sewell Robert | A Forgotten Empire (Vijayanagar) |
| 44) | Sharma, T.T. | Kanthirava Narasaraja Vijaya (Kannada) |

| | | |
|---|---|---|
| 45) | Shervani and Joshi (Ed) | History of Medieval Deccan, 2 vols. |
| 46) | Sharma Rao, M | A Brief History of Mysore (Kannada) |
| | Sharma Rao. M | Modern Mysore, vol 1 Bangalore, 1936 |
| 47) | Shivananda, V | Simapurusha Shadakshara Deva, Samaja Pustakalaya, Dharwar, 1966 |
| 48) | Sinha Narendra Krishna | Haidar Ali, Calcutta, 1949 |
| 49) | Sitaramaiya V (Ed) | Tirumalarya (Kannada) Kavikavya Parampare Series, No.17, B'lore 980 |
| 50) | Srinivasan, C.K | Maratha Rule in the Carnatic (Annamalai University, 1944) |
| 51) | Swaminathan | Role of Feudatories in Vijayanagar |
| 52) | Swaminathan K.d. | The Nayaks of Ikkeri, Madras, 1957 |
| 53) | Sastri Prof. K.A.NIlakantha | A History of South India, 4th Edition, Madras, 1976 |
| 54) | Taylor Wiliam | A Catalogue Raisonne of Oriental Manuscripts, 2 vols, Madras, 1857-1860 |
| | Taylor William | A catalogue Raisonne of Oriental Manscripts, Vol.-iii, Madras, 1862 |
| 55) | Tipperudraswamy | Karnataka Samskriti Samikshe (Kannada) |
| 56) | Varma | History fo Bijapur |
| 57) | Venkaiya | Narapati Vijayam or Ramarasiyamu (Telugu), Gustav Oppert (Ed), Madras |
| 58) | Venkata Ratnam, A.V. | Local self Government under Vijayanagar |
| 59) | Wilks Mark | Historical Sketches of South India in an attempt to trace the History of Mysore, 1930 |

## ನಿಯತಕಾಲಿಕೆಗಳು


| | | |
|---|---|---|
| 1) | Achyutarao,D.S. | The early Wodeyar's of Mysore and their Cultural Traditions; Cultural and Heritage, Quarterly Journal of Mythic Society, Bangalore, pp. 179-194 |
| 2) | Ferroli, S.J. | The General attitude of the Rajas of Mysore towards the ancient Missions of the S.J. Vol.25 (1947) Journal of IndianHistory, Trivandram, pp. 193-200 |
| 3) | Krishna Swamy Aiyangar S | The History of Mysore, Vol.31, (1940-41), Q.J.M.S. Bangalore, pp. 275-296 |
| 4) | Krishna, M.H | Shivaji and the Mysore Raj, Vol. 31, (1940-41), Q.J.M.S. Bangalore, pp. 380-383 |
| 5) | Ramachandra Rao, B | Poligars of Mysore and their Civilization, A study, Vol.30, (1938-39), Q.J.M.S. Bangalore, pp. 150-162 |
| 6) | Sarkar, J.N | (a) Shahji Bhonsle in Mysore Vol. XLVI, No.1, (July 1929), Modern Review, Calcutta, pp.7-12<br>(b) A page of from early Mysore History, Vol. XLVI, No.5, (Nov. 1929), Modern Review Calcutta, pp. 501-503 |
| 7) | Shama Sastri R | Malnad Chiozs, Vol. 13, (1923), Q.J.M.S. Bangalore, pp. 755-766 |
| 8) | Srikanta Sastri | Two Grants of Karnataka Raja of Mysore: Cultural and Heritage Number (1956) Q.J.M.S. Bangalore pp. 195-210 |
| 9) | Subba Rao, N | (a) Kanthirava Narasaraja Wodeyar of Mysore, (1638-1659), a study, Vol.3 (1929), Half |

| | | |
|---|---|---|
| | | yearly Journal of the Mysore University, pp. 139-168<br>(b) Devaraja Wodeyar of Mysore (1659-1673), A retrospeet, Vol.3, (1929), Half Years Journal of the Mysore University, pp. 74-96<br>(c) Raja Wodeyar of Mysore and by Suceessors, (1576-1638), Vol.4, (1930), Half yearly Journal of the Mysore Unviersity, pp.245-261<br>(d) Chikkadevaraja Wodeyar of Mysore and his successors (1673-1761), Vol.23, (1932-33), Q.J.M.S. Bangalore, pp. 26-42<br>(e) Two centuries of Wodeyar's Rule in Mysore (1565-1761), Vol.23, (1932-33), Q.J.M.S. Bangalore, pp.170-193. |

# ಸಂಕೇತಾಕ್ಷರಗಳು

1) ಎ.ಕ. (ಎನ್.ಎಸ್) – ಎಫಿಗ್ರಾಫಿಯ ಕರ್ನಾಟಕ (ನ್ಯೂಸೀರಿಸ್) ಎಫಿಗ್ರಾಫಿಯ ಕರ್ನಾಟಕ ಪರಿಷ್ಕೃತ ಆವೃತ್ತಿ

2) ಕೃ.ಪೇ. – ಕೃಷ್ಣರಾಜಪೇಟೆ

3) ಪಾಂಪು – ಪಾಂಡವಪುರ

4) ಶ್ರೀ.ಪ – ಶ್ರೀರಂಗಪಟ್ಟಣ

5) ಕಂ.ನ.ವಿ. – ಕಂಠೀರವ ನರಸರಾಜ ವಿಜಯಂ

6) ಕ್ಯೂ.ಜೆ.ಎಂ.ಎಸ್ – ಕ್ವಾಟರ್ಲಿ ಜನರಲ್ ಆಫ್ ಮಿಥಿಕ್ ಸೊಸೈಟಿ



ಶ್ರೀ ರಂಗನಾಥಸ್ವಾಮಿ ದೇವಾಲಯ



ಲಕ್ಷ್ಮಿ ನರಸಿಂಹಸ್ವಾಮಿ ದೇವಸ್ಥಾನ, ಶ್ರೀರಂಗಪಟ್ಟಣ



ಶ್ರೀ ಗಂಗಾಧರೇಶ್ವರ ಸ್ವಾಮಿ ದೇವಸ್ಥಾನ




ವಾಟರ್‌ಗೇಟ್, ಶ್ರೀರಂಗಪಟ್ಟಣ



ದರಿಯಾದೌಲತ್ ಬಾಗ್‌ನ ಮಹಾದ್ವಾರ



ದರಿಯಾ ದೌಲತ್ ಬಾಗ್



ಜಮ್ಮು ಮಸೀದಿ, ಶ್ರೀರಂಗಪಟ್ಟಣ



ಟಿಪ್ಪು ಸುಲ್ತಾನನ ಮೃತದೇಹ ದೊರೆತ ಸ್ಥಳ, ಶ್ರೀರಂಗಪಟ್ಟಣ



ಹೈದರಾಲಿ ಮತ್ತು ಟಿಪ್ಪುಸುಲ್ತಾನ್ ಕಾಲದ ಮದ್ದಿನಮನೆ



ಗುಂಬಜ್ ಟಿಪ್ಪುಸುಲ್ತಾನ್ ಮತ್ತು ಆತನ ತಂದೆ ತಾಯಿಯವರ ಸಮಾಧಿ ಸ್ಥಳ



ಕರ್ನಲ್ ಬೇಲಿ ಡೆಂಜನ್‌ನಲ್ಲಿರುವ ಫಿರಂಗಿ

